ಕವಿರಾಜ ಗ್ರಂಥಮಾಲಾ ಕುಸುಮ ೫

# ಭೋಜ ಕಾಳಿದಾಸ

(ಪ್ರಥಮ ಭಾಗ)

ಹರಿಕಥಾ ವಿದ್ವಾನ್, ಕೀರ್ತನಚತುರ ಬಿರುದಾಂಕಿತರೂ
ಕರ್ನಾಟಕಾಂಧ್ರಕವಿಗಳೂ
ಆದ
ಬಿ. ಭೀಮರಾಜು ಇವರಿಂದ
ರಚಿಸಲ್ಪಟ್ಟಿದು

ದ್ವಿತೀಯ ಮುದ್ರಣ ೨೦೦೦ ಪ್ರತಿಗಳು



ತುಮಕೂರು
ಶ್ರೀ ಪಾರ್ಶ್ವನಾಥ ಪ್ರಿಂಟಿಂಗ್ ವರ್ಕ್ಸ್
1934

# ಪ್ರಥಮ ಮುದ್ರಣದ ಪೀಠಿಕೆ.

ಭೋಜರಾಜೇಂದ್ರನಿಗೆ "ಕವಿಕಲ್ಪವೃಕ್ಷ" ಎಂಬ ಬಿರುದು ಬಂದಿರುವುದು ಈತನು ಕವಿಗಳಿಗೆ ಅಕ್ಷರಕ್ಕೆ ಲಕ್ಷ ಧನವನ್ನು ಕೊಡುತ್ತಿದ್ದನೆಂದು ಪ್ರತೀತಿಯಿದೆ

ಕವಿತಾ ಪ್ರೌಢಿಮೆಯು ಅತ್ಯುನ್ನತದೆಸೆಗೆ ಬಂದು, ಕವಿಶಿರೋಮಣಿಗಳೆಲ್ಲರೂ ಭೋಜಾಶ್ರಯವನ್ನು ಕೋರಿ ಬರುತ್ತಿದ್ದರು ಈತನ ಕಾಲದಲ್ಲಿ ಕವಿಕುಲಲಲಾಮನಾದ ಕಾಳಿದಾಸನು ಆಸ್ಥಾನದಲ್ಲಿದ್ದು ತನ್ನ ಅಪ್ರತಿಮವಾದ ಕವಿತಾ ಪ್ರಭೆಯನ್ನು ದಿಗ್ದರ್ಶನವಾಗುವಂತೆ ಮಾಡಿ, ಇತರ ಸಾಮಾನ್ಯ ಕವಿಗಳಿಗೂ ಕೂಡ ರಾಜಮರ್ಯಾದೆಯನ್ನು ದೊರಕಿಸಿ, ತನ್ನ ಸಹೋದ್ಯೋಗಿಗಳಲ್ಲಿ ಸಹಾನುಭೂತಿಯನ್ನು ವ್ಯಕ್ತಪಡಿಸಿರುವನು

ಕವಿಗಳಿಗೆ ರಾಜಾಶ್ರಯವೋ, ಮಹಾಜನಾಶ್ರಯವೋ ಅತ್ಯಾವಶ್ಯಕ್ಯವು ನಿರಾಶ್ರಿತರಾದ ಕವಿಗಳು 'ಕಪಿ'ಗಳಾಗುವುದರಲ್ಲಿ ಸಂದೇಹವಿಲ್ಲ! ಭೋಜರಾಜನು ಅಕ್ಷರಕ್ಕೆ ಲಕ್ಷ ಧನವನ್ನು ಕೊಡುತ್ತಿದ್ದರೆ, ನಮ್ಮವರು ಅಕ್ಷರಕ್ಕೆ ಲಕ್ಷ್ಯ (ಗಮನ) ಕೊಟ್ಟರೂ ಸಾಕು ಈಗ ಕನ್ನಡನಾಡಿನಲ್ಲಿ ಎಷ್ಟೋ ಜನ ಸಾಹಿತ್ಯ ಸೇವಾಧುರಂಧರರೂ, ವಾಙ್ಮಯ ಸೇವಕರೂ ಟೊಂಕಕಟ್ಟಿ ನಿಂತು ಭಾಷಾಭಿವೃದ್ಧಿಗಾಗಿ ಉತ್ತೇಜನಕೊಡುವೆವೆಂದು ಸಭೆಗಳನ್ನೂ, ಪ್ರಾಂತಿಕ ಏಕೀಕರಣಗಳನ್ನೂ ನಡೆಯಿಸುತ್ತಿರುವರು ಅದಾವ ಮೂಲೆಗೂ ಸಾಲದು ಮಾಡುವ ಅಲ್ಪಸ್ವಲ್ಪ ಕಾರ್ಯದಲ್ಲಿಯೂ ನಿಷ್ಪಕ್ಷಪಾತತೆಯಿಂದ ಭಾಷಾಭಿವೃದ್ಧಿಯನ್ನು ಬಯಸಿ ಮಾಡುವುದಾದರೆ ಲೋಕಹಿತವಾದೀತು ಗುಣೈಕ ಪಕ್ಷಪಾತಿಗಳಾದ ಮುಂದಾಳುಗಳು ನಮ್ಮ ಕನ್ನಡನಾಡಿಗೆ ಪ್ರಕೃತ ಬೇಕು

ಕಾಳಿದಾಸನು ಕುರುಬನಲ್ಲ, ಕಬೀರನು ತುರುಕನಲ್ಲ ಕನಕನು ಬೇಡನಲ್ಲ, ವೇಮಣ್ಣನು ರೆಡ್ಡಿ ಯಾ ಒಕ್ಕಲಿಗನಲ್ಲ ಅವರಂಥವರು, ಇವರಿಂಥವರೆಂದು ವ್ಯಾಖ್ಯಾನಗಳನ್ನು ಮಾಡುವುದರಿಂದ ಫಲವಿಲ್ಲ ಅವರು ಯಾರು ಆಗಲಿ ಕೃತಿಯಿಂದ ಮಹಾತ್ಮರೆಂದು ಎಲ್ಲರೂ ಒಪ್ಪಿಕೊಳ್ಳುವರು ಅವರ

ಹೆಸರು ಚಿರಸ್ಥಾಯಿಯಾಗಿರುವುದು ಶತಮಾನಗಳಗಟ್ಟಲೆ ಬೇರೂರಿರುವ ಆ ಮಹನೀಯರ ವಿಚಾರವನ್ನು ಬೇರೆ ರೀತಿಯಿಂದ ಹೊಸದಾಗಿ ಸಿದ್ಧಾಂತ ಮಾಡುವುದು ಎಷ್ಟರಮಟ್ಟಿಗೆ ಸಾಧ್ಯವೋ ಪಾಠಕರೇ ಊಹಿಸಬಹುದು ಅದು ಹೇಗಾದರೂ ಇರಲಿ ಆಂಧ್ರಗ್ರಂಥಗಳ ಸಹಾಯದಿಂದ ನಾನು ಹದಿನೆಂಟು ಕಥೆಗಳಾಗಿ ಅನೇಕ ಚಮತ್ಕಾರವಾದ ಸಮಸ್ಯಾಶ್ಲೋಕಗಳನ್ನು ಕನ್ನಡ ಪದ್ಯಗಳಾಗಿ ಬರೆದು "**ಭೋಜ-ಕಾಳಿದಾಸ**" ಎಂಬ ಹೆಸರಿನಿಂದ ಈ ಪುಸ್ತಕವನ್ನು ವಿರಚಿಸಿರುತ್ತೇನೆ

ಈ ಕೃತಿಯನ್ನು ಮುದ್ರಿಸುವ ವಿಚಾರದಲ್ಲಿ ಬಳ್ಳಾರಿ ಜಿಲ್ಲಾ ಆಲೂರು ತಾಲ್ಲೂರು ಮೊಲಗವಲ್ಲ ಸುಪ್ರಸಿದ್ಧ ರೆಡ್ಡಿವಂಶಜರಾದ **ಮ॥ ರಾ॥ ದೊಡ್ಡ ಸಂಜೀವರೆಡ್ಡಿಯವರು** ತೋರಿಸಿರುವ ಔದಾರ್ಯವನ್ನು ನಾನು ಎಷ್ಟು ಕೊಂಡಾಡಿದರೂ ಅಲ್ಪವಾಗಿರುವುದು ಇವರು ಕೇವಲ ಶ್ರೀಮಂತರು, ದೊಡ್ಡ ಕುಟುಂಬಿಗಳು, ಇಷ್ಟು ಮಾತ್ರವಲ್ಲ, ಬಡವರ ಸಂಜೀವನೆಂದರೆ ಅತಿಶಯೋಕ್ತಿಯಾಗಲಾರದು

ಈ ಮಹನೀಯರ ಮಾತೃಭಾಷೆಯು ಆಂಧ್ರ ಹೀಗಿದ್ದರೂ ನೆರೆಭಾಷೆಯಾದ ಕರ್ನಾಟಕ ಸಾಹಿತ್ಯಕ್ಕೆ ಇವರು ತೋರಿಸಿರುವ ಘನತರವಾದ ತ್ಯಾಗಬುದ್ಧಿಯು ಭೋಜನನ್ನು ಸ್ಮರಣೆಗೆ ತರುವುದು

ರೆಡ್ಡಿರಾಜರು ಅನಮಾನ ತ್ಯಾಗಿಗಳು, ಕೀರ್ತಿವಂತರು, ಅನುಪಮವಾದ ಕ್ಷಾತ್ರತೇಜವು ಇವರಲ್ಲ ಈಗಲೂ ಮೂರ್ತಿಮತ್ತಾಗಿರುವುದು ಈ ಪುಸ್ತಕವನ್ನು ಪ್ರಕಾಶಪಡಿಸಿದ ಶ್ರೀಯುತ ದೊಡ್ಡಸಂಜೀವರೆಡ್ಡಿಯವರು ಯಾವ ಸ್ವಾರ್ಥವೂ ಇಲ್ಲದೆ ಇದಕ್ಕೆ ತಗಲುವ ವಿಶಿಷ್ಟ ಖರ್ಚನ್ನೂ ತಾವೇ ವಹಿಸಿಕೊಂಡು ಅನೇಕ ಶ್ರೀಮಂತರಿಗೆ ಉತ್ತಮ ಮೇಲ್ಪಂಙ್ತಿಯನ್ನು ಹಾಕಿಕೊಟ್ಟಿರುವರು ಶ್ರೀ ಸಂಜೀವರೆಡ್ಡಿ ಅವರು ಇದನ್ನು ಮುದ್ರಿಸಿದ ಹಲವು ದಿನಗಳ ಮೇಲೆ ದಿವಂಗತರಾಗಿರುವರು ಇವರ ಆತ್ಮಕ್ಕೆ ಶಾಂತಿಪ್ರದವಾದ ಮೋಕ್ಷವಿಯಲೆಂದು ನಾನು ಪರಮಾತ್ಮನನ್ನು ಅನನ್ಯಭಕ್ತಿಯಿಂದ ಪ್ರಾರ್ಥಿಸಿ ಪ್ರಥಮ ಮುದ್ರಣಕ್ಕೆ ಸಹಾಯಮಾಡಿದ ಆ ಮಹಾಶಯರ ಸ್ಮಾರಕವನ್ನು ನಮ್ಮ ಗ್ರಂಥಮಾಲೆಯಲ್ಲಿ ಸರ್ವದಾ ನಿಲ್ಲಿಸಿ ಘನಪೂರ್ವಕರಾಗಿ ಅವರನ್ನು ಸ್ಮರಿಸು

# ದ್ವಿತೀಯ ಮುದ್ರಣದ ಪೀಠಿಕೆ.

ಪ್ರಥಮ ಮುದ್ರಣವಾದ ಬಹುಕಾಲದಮೇಲೆ ದ್ವಿತೀಯ ಮುದ್ರಣವೂ ಆಗಬೇಕಾಯಿತೆಂದು ವಿಷಾದಿಸುತ್ತೇನೆ

ಈಗ ಪ್ರಯಾಸದಿಂದ ಇದರ ದ್ವಿತೀಯ ಭಾಗವೂ ಮುದ್ರಿಸುತ್ತಿದೆ ಇದರಲ್ಲಿ ಅಪೂರ್ವವಾದ ೨೭ ಕಥೆಗಳೂ, ಅತ್ಯದ್ಭುತ ಸಮಸ್ಯಾ ಶ್ಲೋಕಗಳೂ ಮುದ್ರಿಸಿ ಮಹಾಶಯರ ಮುಂದಿರಿಸುತ್ತೇನೆ

ನನ್ನ ಗ್ರಂಥಮಾಲಾ ಕುಸುಮಗಳನ್ನೆಲ್ಲಾ ಧರಿಸಿಕೊಂಡು, ಆದರದಿಂದ ಪಠಿಸಿ, ಪ್ರೋತ್ಸಾಹಿಸಬೇಕಾಗಿ ಪ್ರಾರ್ಥಿಸುವ,

ನಮ್ರ ಸೇವಕ,
**ಬಿ ಭೀಮರಾಜು**

ಹೆಸರು ಚಿರಸ್ಥಾಯಿಯಾಗಿರುವುದು. ಶತಮಾನಗಳಗಟ್ಟಲೆ ಬೇರೂರಿರುವ ಆ ಮಹನೀಯರ ವಿಚಾರವನ್ನು ಬೇರೆ ರೀತಿಯಿಂದ ಹೊಸದಾಗಿ ಸಿದ್ಧಾಂತ ಮಾಡುವುದು ಎಷ್ಟರಮಟ್ಟಿಗೆ ಸಾಧ್ಯವೋ ವಾಚಕರೇ ಊಹಿಸಬಹುದು. ಅದು ಹೇಗಾದರೂ ಇರಲಿ ಆಂಧ್ರಗ್ರಂಥಗಳ ಸಹಾಯದಿಂದ ನಾನು ಹದಿನೆಂಟು ಕಥೆಗಳಾಗಿ ಅನೇಕ ಚಮತ್ಕಾರವಾದ ಸಮಸ್ಯಾಶ್ಲೋಕಗಳನ್ನು ಕನ್ನಡ ಪದ್ಯಗಳಾಗಿ ಬರೆದು "**ಭೋಜ-ಕಾಳಿದಾಸ**" ಎಂಬ ಹೆಸರಿನಿಂದ ಈ ಪುಸ್ತಕವನ್ನು ವಿರಚಿಸಿರುತ್ತೇನೆ

ಈ ಕೃತಿಯನ್ನು ಮುದ್ರಿಸುವ ವಿಚಾರದಲ್ಲಿ ಬಳ್ಳಾರಿ ಜಿಲ್ಲಾ ಆಲೂರು ತಾಲ್ಲೂರು ಮೊಲಗವಲ್ಲಿ ಸುಪ್ರಸಿದ್ಧ ರೆಡ್ಡೀವಂಶಜರಾದ **ಮ|| ರಾ|| ದೊಡ್ಡ ಸಂಜೀವರೆಡ್ಡಿಯವರು** ತೋರಿಸಿರುವ ಔದಾರ್ಯವನ್ನು ನಾನು ಎಷ್ಟು ಕೊಂಡಾಡಿದರೂ ಅಲ್ಪವಾಗಿರುವುದು ಇವರು ಕೇವಲ ಶ್ರೀಮಂತರು, ದೊಡ್ಡ ಕುಟುಂಬಿಗಳು, ಇಷ್ಟು ಮಾತ್ರವಲ್ಲ, ಬಡವರ ಸಂಜೀವವೆಂದರ ಅತಿಶಯೋಕ್ತಿಯಾಗಲಾರದು.

ಈ ಮಹನೀಯರ ಮಾತೃಭಾಷೆಯು ಆಂಧ್ರ ಹೀಗಿದ್ದರೂ ನೆರೆಭಾಷೆಯಾದ ಕರ್ನಾಟಕ ವಾಙ್ಮಯಕ್ಕೆ ಇವರು ತೋರಿಸಿರುವ ಘನತರವಾದ ತ್ಯಾಗಬುದ್ಧಿಯು ಭೋಜನನ್ನು ಸ್ಮರಣೆಗೆ ತರುವುದು

ರೆಡ್ಡಿರಾಜರು ಅಸಮಾನ ತ್ಯಾಗಿಗಳು, ಕೀರ್ತಿವಂತರು, ಅನುಪಮವಾದ ಕ್ಷಾತ್ರತೇಜವು ಇವರಲ್ಲಿ ಈಗಲೂ ಮೂರ್ತಿಮತ್ತಾಗಿರುವುದು ಈ ಪುಸ್ತಕವನ್ನು ಪ್ರಕಾಶಪಡಿಸಿದ ಶ್ರೀಯುತ ದೊಡ್ಡಸಂಜೀವರೆಡ್ಡಿಯವರು ಯಾವ ಸ್ವಾರ್ಥವೂ ಇಲ್ಲದೆ ಇದಕ್ಕೆ ತಗಲುವ ವಿಶಿಷ್ಟ ಖರ್ಚನ್ನೂ ತಾವೇ ವಹಿಸಿಕೊಂಡು ಅನೇಕ ಶ್ರೀಮಂತರಿಗೆ ಉತ್ತಮ ಮೇಲ್ಪಂಙ್ಕ್ತಿಯನ್ನು ಹಾಕಿಕೊಟ್ಟಿರುವರು. ಶ್ರೀ ಸಂಜೀವರೆಡ್ಡಿ ಅವರು ಇದನ್ನು ಮುದ್ರಿಸಿದ ಹಲವು ದಿನಗಳ ಮೇಲೆ ದಿವಂಗತರಾಗಿರುವರು. ಇವರ ಆತ್ಮಕ್ಕೆ ಶಾಂತಿಪ್ರದವಾದ ಮೋಕ್ಷವೀಯಲೆಂದು ನಾನು ಪರಮಾತ್ಮನನ್ನು ಅನನ್ಯಭಕ್ತಿಯಿಂದ ಪ್ರಾರ್ಥಿಸಿ ಪ್ರಥಮ ಮುದ್ರಣಕ್ಕೆ ಸಹಾಯಮಾಡಿದ ಆ ಮಹಾಶಯರ ಸ್ಮಾರಕವನ್ನು ನಮ್ಮ ಗ್ರಂಥಮಾಲೆಯಲ್ಲಿ ಸರ್ವದಾ ಸಿಲ್ಲಿಸಿ ಘನಪೋಷಕರಾಗಿ ಅವರನ್ನು ಸ್ಮರಿಸುತ್ತೇನೆ.

# ದ್ವಿತೀಯ ಮುದ್ರಣದ ಪೀಠಿಕೆ.

ಪ್ರಥಮ ಮುದ್ರಣವಾದ ಬಹುಕಾಲದಮೇಲೆ ದ್ವಿತೀಯ ಮುದ್ರಣಮಾಡಿಸಬೇಕಾಯಿತೆಂದು ವಿಷಾದಿಸುತ್ತೇನೆ.

ಈಗ ಪ್ರಯಾಸದಿಂದ ಇದರ ದ್ವಿತೀಯ ಭಾಗವೂ ಮುದ್ರಿಸುತ್ತಿದೆ ಅದರಲ್ಲಿ ಅಪೂರ್ವವಾದ ೩೭ ಕಥೆಗಳೂ, ಅತ್ಯದ್ಭುತ ಸಮಸ್ಯಾ ಶ್ಲೋಕಗಳೂ ಮುದ್ರಿಸಿ ಮಹಾಶಯರ ಮುಂದಿರಿಸುತ್ತೇನೆ

ನಮ್ಮ ಗ್ರಂಥಮಾಲಾ ಕುಸುಮಗಳನ್ನೆಲ್ಲಾ ತರಿಸಿಕೊಂಡು, ಆದರದಿಂದ ಪಠಿಸಿ, ಪ್ರೋತ್ಸಾಹಿಸಬೇಕಾಗಿ ಪ್ರಾರ್ಥಿಸುವ,

ನಮ್ರ ಸೇವಕ,

**ಬಿ ಭೀಮರಾಜು.**

ಓಂ.

# ಕವಿರಾಜ ಗ್ರಂಥಮಾಲಾ.

## ಘನ ಪೋಷಕರು

| ಗ್ರಂಥಗಳು | ಗ್ರಂಥ ನಿರ್ಮಾಪಕರು. |
|---|---|
| ೧ ವೇಮನ ಪದ್ಯಗಳು (ಪ್ರಥಮ ಭಾಗ)<br>೨ ವೀರಬಾಲೆ | ಕೋಲಾರ ಜಿಲ್ಲಾ ನಂದಿ ಶ್ರೀ ಸೊಣ್ಣಪ್ಪ ಸಹೋದರರು, ಜಮೀನ್ದಾರ್. |
| ೩ ಭೋಜ ಕಾಳಿದಾಸ (ಪ್ರಥಮ ಭಾಗ) | ಬಳ್ಳಾರಿ ಜಿಲ್ಲಾ ಆಲೂರು ತಾಲ್ಲೂಕು ಮೊಲಗವಲ್ಲ ದಿವಂಗತ ಶ್ರೀ ದೊಡ್ಡಸಂಜೀವರೆಡ್ಡಿಅವರು. |
| ೪ ಭಕ್ತಾಮೃತ | ಬೀರೂರು ಖರೀದಿ ಶ್ರೀ ಸತ್ಯನಾರಾಯಣಶ್ರೇಷ್ಠಿಗಳವರು, ಎಂ. ಎಲ್ ಸಿ |
| ೫ ಸತಾತ್ಪರ್ಯ ವೇಮನಶತಕ | ಶಿಡ್ಲಘಟ್ಟದ ತಾಲ್ಲೂಕು ಮೇಲೂರು ರೇಷ್ಮೆ ವ್ಯಾಪಾರಿಗಳು ಮ॥ ಚಿಕ್ಕಮುನಿಯಪ್ಪನವರು ಮತ್ತು ಕೆ. ನಂಜುಂಡಪ್ಪನವರು. |

೬ ಮೈಸೂರು ಆಂಧ್ರರಾಜಕ್ಷತ್ರಿಯ ಸಂಘದ ಅಧ್ಯಕ್ಷರಾದ ಮ॥ ರಾ॥ ಶ್ರೀ॥ ವಾಸುದೇವರಾಜು ಅವರು ಗ್ರಂಥಮಾಲಾ ಪೋಷಕರಾಗಿ ಸರ್ವವ್ಯಾಪಿಯಾಗುವಂತೆ ಮಾಡಲು ಅಂಗೀಕರಿಸಿದುದಕ್ಕಾಗಿ ಅವರಿಗೂ, ನಮ್ಮ ಘನ ಪೋಷಕಬೃಂದಕ್ಕೂ ಅಮಿತ ಕೃತಜ್ಞತಾ ವಂದನೆಗಳನ್ನು ಸಮರ್ಪಿಸುತ್ತೇನೆ.

## ನಮ್ಮ ನಾಟಕರಾಜಗಳನ್ನು ರಂಗದಲ್ಲಿಪ್ರದರ್ಶನಮಾಡುತ್ತಲಿರುವ ಪ್ರೋತ್ಸಾಹಕ ಮಹಾಶಯರು.

| | |
|---|---|
| ೧ ಸತ್ಯವಾನ್ ಸಾವಿತ್ರಿ<br>೨ ಶುಕಾವತಾರ (ಕಬೀರ್ ಜೀವಮಾನ)<br>೩ ವೀರಬಜಾಜಿ<br>೪ ರಾವಣ ದಿಗ್ವಿಜಯ<br>೫ ಮಯೂರಧ್ವಜ<br>೬ ಭಕ್ತ ಕನಕದಾಸ್ | ಗುಬ್ಬಿ ನಾಟ್ಯಸಂಘದ ಪ್ರೊಪ್ರೈಟರುಗಳಾದ ಮ॥ ರಾ॥ ಶ್ರೀ॥ ಜಿ. ಎಚ್. ವೀರಣ್ಣನವರು, ಟಿ. ನೀಲಕಂಠಪ್ಪನವರು. |
| ೧ ಗರುಡ ಗರ್ವಭಂಗ<br>೨ ವೀರರಾಣಿ ಕಿತ್ತೂರು ಚನ್ನಮ್ಮ | ಶಿರಹಟ್ಟಿ ನಾಟ್ಯಸಂಘದ ಪ್ರೊಪ್ರೈಟರು ಮ॥ ರಾ॥ ಶ್ರೀ॥ ಎಚ್. ವೆಂಕೋಬರಾಯರು. |

೨ ಭಕ್ತಾನುಗ್ರಹ | ಚಿಕ್ಕನಾಯ್ಕನಹಳ್ಳಿ ಚಂದ್ರಮೌಳೀಶ್ವರ ನಾಟಕ ಸಂಘದ ಪ್ರೊಪ್ರೈಟರು ಮ|| ರಾ|| ಶ್ರೀ|| ಸಿ. ಬಿ ಮಲ್ಲಪ್ಪನವರು.

## ಸಹಾಯಕರು

೧ ಮರಡಿಹಳ್ಳಿ, ಮ|| ಎಸ್. ರುದ್ರರೆಡ್ಡಿಅವರು, ರೆಡ್ಡೀಜನಸಂಘದ ಸೆಕ್ರಟೆರಿ, ಚಿತ್ರದುರ್ಗ

೨ ಮ|| ಬಸಪ್ಪರೆಡ್ಡಿಅವರು, ಜವಿರ್ನಾದಾರ್, ಬಸಪ್ಪನಮಾಳಿಗೆ, ಹಿರಿಯೂರು ತಾಲ್ಲೂಕು.

೩ ಮ|| ಮಲ್ಲಿಕಾರ್ಜುನಯ್ಯನವರು, ರೇಷ್ಮೆ ವ್ಯಾಪಾರಿಗಳು, ಮೇಲೂರು, ಶಿಡ್ಲ ಘಟ್ಟ ತಾಲ್ಲೂಕು.

## ಪರಮ ಪೂಜನೀಯರು.

೧ ಶ್ರೀಮನ್ಮ ಮಹಾರಾಜ, ನಿರಂಜನ ಜಗದ್ಗುರು ಜಯದೇವ ಮುರುಘ ರಾಜೇಂದ್ರ ಮಹಾಸ್ವಾಮಿಗಳವರು, ಚಿತ್ರದುರ್ಗ.

೨ ಶ್ರೀ ಸಿದ್ಧಗಂಗಾಕ್ಷೇತ್ರಾಧ್ಯಕ್ಷರಾದ ಶ್ರೀಮನ್ನಿರಂಜನ ಉದ್ದಾನಸ್ವಾಮಿ ಗಳವರು, ಉಪಾಧ್ಯಕ್ಷರಾದ ಶ್ರೀ ಶಿವಕುಮಾರ ಸ್ವಾಮಿಗಳವರು.

೩ ಶ್ರೀ ಚಿದಾನಂದ ಗುರುಜೀಅವರು, ಗದಗ್.

೪ ಘನವನ್ನು ಪಡೆದ ಕಟ್ಟೆಮಂಚಿ ರಾಮಲಿಂಗರೆಡ್ಡಿ, ಎಂ. ಎ., ಬಾರ್-ಅಟ್-ಲಾ. ಅವರು, ಚಿತ್ತೂರು.

## ಹಿತೈಷಿಗಳು.

೧ ಮ|| ರಾ|| ಶ್ರೀ|| ಡಿ. ಎಲ್. ಪಾಟೀಲರು, ಬಿ. ಎ., ಎಲ್ ಎಲ್. ಬಿ., ಮುಂಬೈ ಹೈಕೋರ್ಟು ವಕೀಲರು, ಧಾರವಾಡ.

೨ ಮ|| ರಾ|| ಶ್ರೀ|| ಎಚ್. ಟಿ. ಕಾಲವಾಡ, ಬಿ.ಎ., ಅವರು, ಮ್ಯಾನೇಜರು, ರೆಡ್ಡೀ ಬ್ಯಾಂಕ್, ಧಾರವಾಡ.

೩ ಮ|| ರಾ|| ಶ್ರೀ|| ಆರ್. ಕೆ. ಪಟೇಲ್, ಮ್ಯಾನೇಜರು, ವೇಮಾರೆಡ್ಡಿ ಸಂಘ, ಗದಗ್.

# ಶುದ್ಧಾಶುದ್ಧ

| ಪುಟ | ಪಙ್ತಿ | ಅಶುದ್ಧ | ಶುದ್ಧ |
|---|---|---|---|
| ೧ | ೨ | ವಂಸ | ವಂಶ |
| ೬ | ೧೫ | ಅದು ಒಗ್ಗಿಹೋಯಿತು | ಅವುಒಗ್ಗಿಹೋದುವು |
| ೬ | ೨೪ | ಮರುಳುಮಾಡಿತು | ಮರುಳುಮಾಡಿದುವು |
| ೮ | ೧೧ | ಬಾಧಿಸದಿರಲಾರದು | ಬಾಧಿಸದಿರಲಾರವು |
| ೧೨ | ೯ | ನೋಡಿ | ಗ್ರಹಿಸಿ |
| ೧೨ | ೧೭ | ಯಾವದೋ | ಯಾವುದೋ |
| ೧೨ | ೧೯ | ಮಂತಿ | ಮಂತ್ರಿ |
| ೧೩ | ೧೨ | ವಧೆಗಳೆನಿಸುವುದು | ವಧೆಗೆಳೆಸುವುದು |
| ೧೪ | ೧೦ | ಕಿಂತಿಲೂ | ಕಿಂತಲೂ |
| ೧೬ | ೧ | ಮನಸಿಟ್ಟಿಯಾ ? | ಮನಸಿಟ್ಟೆಯಾ? |
| ೧೬ | ೨೫ | ಎಂದು | ಎಂದ |
| ೧೭ | ೬ | ಡೈವವೇ | ದೈವವೇ |
| ೧೮ | ೪ | ಬದ್ದಾಂಜಲಿ | ಬದ್ಧಾಂಜಲಿ |
| ೧೯ | ೧೭ | ನಾಗಿರ್ದ | ಪ್ರಾಯನಾಗಿರ್ದ |
| ೨೪ | ೩೫ | ಯಲ್ಲರದಿಪ್ಪರೆ | ಯಲ್ಲಿರದಿದ್ದರೆ |
| ೨೭ | ೭ | ಬರಹ | ಬರೆಹ |
| ೩೩ | ೫ | ಸಾರಂತಗ | ಪಾರಂಗತ |
| ೩೨ | ೧೪ | ತಮಿಸ್ರಾದಿ | ತಮಿಶ್ರಾದಿ |
| ೩೭ | ೨೦ | ಪಿಡೆವಿರೋ | ಪಿಡಿವಿರೋ |
| ೩೮ | ೮ | ಕುಮುದ | ಕುಮುದ |
| ೩೮ | ೨೩ | ಬದುಕುವನಾನು | ಬದುಕುವನಾರು |
| ೩೯ | ೫ | ಪ್ರಯೋಜ | ಪ್ರಯೋಜನ |
| ೪೧ | ೮ | ನಮುಸ್ಕರ | ನಮುಸ್ಕಾರ |
| ೪೨ | ೫ | ಕಾಳದಾಸ | ಕಾಳಿದಾಸ |
| ೪೩ | ೮ | ಭುಜಭಲ | ಭುಜಬಲ |
| ೪೪ | ೧ | ದುರ್ಲಭ | ಕಷ್ಟ |
| ೪೪ | ೯ | ವಿದ್ಯಾಂಸರೂ | ವಿದ್ವಾಂಸರೂ |
| ೪೫ | ೧೧ | ಏನಾಗಿರುವುದೇ | ಏನಾಗಿರುವುದೋ |
| ೪೬ | ೪ | ಸಂದರೀ | ಸುಂದರೀ |
| ೫೪ | ೩ | ಅಹೋ ಬ್ರಾಹ್ಮಣ | ಅಹೋ ರಾಜಾ ! ಬ್ರಾಹ್ಮಣ |
| ೫೫ | ೮ | ತೊಲಗಿದೊಡಾ | ತೊಲಗಿದೊಡಾಗ |
| ೫೬ | ೧೯ | ಮುತಿಯುತ | ಮತಿಯುತ |
| ೬೧ | ೪ | ದಯುಮಾಡಿ | ದಯೆಮಾಡಿ |
| ೬೩ | ೧೦ | ವ್ಯುಎರಡುತ್ಪತ್ತಿ | ಎರಡುವ್ಯುತ್ಪತ್ತಿ |
| ೬೫ | ೨೩ | ಹೆಂಡತಿಯ | ಹೆಂಡತಿಯು |
| ೬೭ | ೧೧ | ಮಹಾಸ್ವ್ಯಾಮಿ | ಮಹಾಸ್ವಾಮಿ |
| ೬೯ | ೨೦ | ಭಟ್ಟ | ಭಟ್ಟ |
| ೭೦ | ೧೩ | ಭೂತಿಯಿನ್ನು | ಭೂತಿಯನ್ನು |
| ೭೧ | ೨೨ | ಈಮಾತನ್ನು ಹೇಮ | ಈಮಾತನ್ನು ಕೇಳಿ ಹೇಮ |

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| ೭೪ | ೭ | ಭಾಗೇಷ | ಭಾಗೇಚ |
| ೭೫ | ೨ | ಕರದು | ಕೆರೆದು |
| ೭೫ | ೧೧ | ಬೇರೆಯಾಗಿಪುವುದಲ್ಲವೆ | ಬೇರೆಯಾಗಿರುವುದೆಂದಲ್ಲವೆ |
| ೭೫ | ೧೫ | ಆದಮೇಲೆ— | ಕಂ॥ ಕುಡುವಾಗ ವಿಪ್ರಪೀಡೆಯು ।<br>ಬಡಿಪಾಗಳ್ಪುತರ ಪೀಡೆಯಿದುವುಲ್ಲದೆ ಮೇ ॥<br>ಣಡಿಗಡಿಗೆ ಶಯನಿಪಾಗಳ್ ।<br>ಮಡದಿಯಪೀಡೆ ಯಿವುಮೂರು ಪೀಡೆಗಳಿರಲ್ಕೆ ॥ |
| ೭೬ | ೧೬ | ಯಂಕೃತ | ಯದಕೃತ |
| ೭೬ | ೧೯ | ಮುನಿಪಸ್ಯನು | ಮುನಿಪನಗಸ್ಯನು |
| ೭೭ | ೩ | ಗುಣಂಗಳನುಂಟಾದ | ಗುಣಂಗಳುಂಟಾದ |
| ೭೭ | ೧೨ | ಪ್ರಭಾದಲ್ಲಿ | ಪ್ರಭಾವದಲ್ಲಿ |
| ೭೭ | ೧೪ | ಪ್ರಿತಿಯಿಂದ | ಪ್ರೀತಿಯಿಂಧ |
| ೭೭ | ೧೬ | ವೃದ್ಟ | ವೃದ್ಧ |
| ೭೩ | ೧೯ | ಬೇಕಾಗಿಹುದು | ಬೇಕಾಗಿಹು |
| ೭೮ | ೧೭ | ಮುಧುಕರ | ಮಧುಕರ |
| ೭೯ | ೧೯ | ಟ್ರೈಕೋನಂ | ಟ್ರೈಕೋನಂಗ |
| ೮೦ | ೧೫ | ಮಣಿಭದ್ರ | ಮಾಣಿಭದ್ರ |
| ೮೨ | ೨ | ವಿದ್ಯತ್ಕವಿ | ವಿದ್ವತ್ಕವಿ |
| ೮೩ | ೧೯ | ಆನಾಲು | ಆನಾಲ್ಕು |
| ೯೨ | ೧೯ | ಹೇಳಿದನು | ಹೇಳಿದರು |
| ೯೨ | ೨೫ | ಕೇಳಿದನು | ಕೇಳಿದೆನು |
| ೯೫ | ೨೦ | ಕಳ್ಳೆಯ | ಕಳೆಯ |
| ೯೮ | ೭ | ನಿರತಿಸಯ | ನಿರತಿಶಯ |
| ೯೮ | ೮ | ಎಂದುದಾಗಿ | ಎಂಬುದಾಗಿ |
| ೯೯ | ೧೨ | ಮಿತತ್ಪುಷ್ಪ | ಮಿಳತ್ಪುಷ್ಪ |
| ೧೦೦ | ೪ | ಸ್ವ್ಯಾಮಿ | ಸ್ವಾಮಿ |
| ೧೦೨ | ೫ | ವಿದ್ಯ್ವಾಂಸನೇ | ವಿದ್ವಾಂಸನೇ |
| ೧೦೨ | ೨೧ | ಬ್ರಾಹ್ಮಣನು | ಬ್ರಾಹ್ಮಣನು |
| ೧೦೪ | ೨೨ | ಎರಡಿನೆ | ಎರಡನೆ |
| ೧೦೫ | ೪ | ಎರಡನೆಯವನು | ಎರಡನೆ ಬ್ರಾಹ್ಮಣ |
| ೧೦೬ | ೨ | ಖ್ವಾತಿ | ಖ್ಯಾತಿ |

ಮುಖಪತ್ರದ ಹಿಂಭಾಗದಲ್ಲಿ ವೀರಬಾಲೆ ೪ ಆಣೆ ಇದೆ. ಅಲ್ಲ ೮ ಆಣೆ.

# ವಿಷಯಾನುಕ್ರಮಣಿಕೆ







ಓಂ.

|| ಶುಭಮಸ್ತು ||

# ಭೋಜ ಕಾಳಿದಾಸ.

## ಭೋಜ.

ಶ್ರೀಮತ್ ಮಹಾರಾಜಾಧಿರಾಜ ವಿಕ್ರಮಾದಿತ್ಯ ಸಾರ್ವಭೌಮನ ವಂಶದಲ್ಲಿ ಜನಿಸಿದ ಸಿಂಧುಲನೆಂಬ ರಾಜನು ಧಾರಾ (ಉಜ್ಜಯಿನಿ) ಪುರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ವಿದರ್ಭದೇಶವನ್ನು ಪಾಲಿಸುತ್ತಿದ್ದನು. ಈತನು ತನ್ನ ಅನುಪಮವಾದ ಬಲ ಪರಾಕ್ರಮಗಳಿಂದ ಶತ್ರುರಾಜರನ್ನು ಜಯಿಸಿ, ಕಪ್ಪವನ್ನು ತೆಗೆದುಕೊಳ್ಳುತ್ತ, ಪ್ರಜೆಗಳನ್ನು ಪುತ್ರವಾತ್ಸಲ್ಯದಿಂದ ನೋಡುತ್ತ, ದೈವಭಕ್ತನಾಗಿ ಧರ್ಮಮಾರ್ಗವನ್ನತಿಕ್ರಮಿಸದೆ ರಾಜ್ಯಭಾರ ಮಾಡುತ್ತ ಇದ್ದನು ಸಕಲ ಭೋಗ ಭಾಗ್ಯ ಸಂಪನ್ನನಾಗಿದ್ದರೂ ವಾರ್ಧಕ್ಯ ವುಂಟಾಗುವವರೆಗೂ ಪುತ್ರಸಂತಾನವಾಗದ ನಿಮಿತ್ತ ಅಹರ್ನಿಶಿಯೂ ಚಿಂತಾ ಕ್ರಾಂತನಾಗಿದ್ದನು. ಲೋಕದಲ್ಲಿ ಬಾಲ್ಯದಿಂದಲೂ ಕುಮಾರರು ಮಾಡುವ ಮುದ್ದು ಚೇಷ್ಟೆಗಳನ್ನು ನೋಡಿ ಆನಂದಸಾಗರದಲ್ಲಿ ಮುಳುಗಿ ತೇಲುವ ಪುತ್ರ ವಂತರಾದ ಮಾತಾಪಿತೃಗಳಭಾಗ್ಯವನ್ನು ಹೊಗಳುತ್ತ ಜನ್ಮಾಂತರದಲ್ಲಿ ಅಂತಹ ಪುಣ್ಯವನ್ನು ಮಾಡಿಕೊಳ್ಳದೆ ಹೋದೆನಾಗಬಹುದು ಎಂದು ತನ್ನ ಜೀವಿತ ವನ್ನು ದೂಷಿಸಿಕೊಳ್ಳುತ್ತಿದ್ದನು. 'ಅಪುತ್ರಸ್ಯ ಗತಿರ್ನಾಸ್ತಿ' ಪುತ್ರನಿಲ್ಲದವನಿ ಗಾವುದೂ ಗತಿಯಿಲ್ಲ ಎಂಬ ಆರ್ಯೋಕ್ತಿಯನ್ನು ಸ್ಮರಿಸಿಕೊಂಡಾಗಲೆಲ್ಲ ಇಹ ಲೋಕಾನಂದಮಾತ್ರಕ್ಕಲ್ಲದೆ, ಪರಲೋಕಾನಂದಕ್ಕೂ ದೂರನಾದೆನಲ್ಲಾ ಎಂದು ತಹತಹಪಡುತ್ತಿದ್ದನು. ಎಷ್ಟು ವಿಧವಾಗಿ ಪರಿತಪಿಸಿದರೂ ದೈವವು ಅನುಕೂಲಿಸದಿರುವಾಗ ಯಾರೇನು ಮಾಡುವರು.

ಈರೀತಿ ಸಿಂಧುಲನು ಪುತ್ರರಿಲ್ಲದ ಕಳವಳದಿಂದ ಏನೊಂದೂ ತೋಚದೆ ಪಾಪಶಾಂತಿಗಾಗಿ ಗೋದಾನ, ಭೂದಾನ, ಹಿರಣ್ಯದಾನಾದಿ ಮಹಾದಾನಗಳನ್ನು ಮಾಡಿ, ಶ್ರೀರಂಗಾದಿ ದಿವ್ಯ ದೇಶಗಳಲ್ಲಿಯೂ, ಕಾವೇರಿ ಮೊದಲಾದ ಪುಣ್ಯತೀರ್ಥಗಳಲ್ಲಿಯೂ ಚರಿಸಿ, ಮನಶ್ಶಾಂತಿಗಾಗಿ ಭೂಪ್ರದಕ್ಷಿಣೆಮಾಡಿದನು.

ಹೀಗೆ ಕೆಲವುಕಾಲ ಕಳೆಯಲಾಗಿ, ಯಾವ ಪುಣ್ಯಪರಿಪಾಕದಿಂದಲೋ ಸಿಂಧುಲನ ಧರ್ಮಪತ್ನಿಯಾದ ಸಾವಿತ್ರಿಯು ಗರ್ಭವತಿಯಾದಳು. ಇಷ್ಟು ಸಿಂಧುಲನ ಸಂತೋಷವನ್ನು ಏನೆಂದು ಹೇಳಲಾದೀತು! ದೈವಾನುಕೂಲ್ಯದಿಂದ ಇಷ್ಟು ದಿನಕ್ಕೆ ಸಂತಾನಪ್ರಾಪ್ತಿಯಾಗುವ ಸಮಯ ಒದಗಿತೆಂದು ಒಳಗೊಳಗ ಆನಂದಪರವಶನಾದನು. ಹೀಗಿರಲು ಸಾವಿತ್ರಿಗೆ ನವಮಾಸಗಳು ತುಂಬಿ ಶುಭ ದಿನದಲ್ಲಿ ಮಂಗಳ ಮುಹೂರ್ತದಲ್ಲಿ ಚಂದ್ರನಂತೆ ಸುಪ್ರಕಾಶನಾದ ಸುಕುಮಾರನು ಉದಯಿಸಿದನು

ಅಂತಹ ಮನೋಹರನಾದ ಸುಕುಮಾರನುದಯಿಸಿದ ಸಂಗತಿಯನ್ನು ಕೇಳಿ ಸಿಂಧುಲನು ಪರಮಾನಂದ ಸಿಂಧುವಿನಲ್ಲಿ ಮುಳುಗಿ ಓಲಾಡಿದುದೇನೂ ಆಶ್ಚರ್ಯವಲ್ಲ. ಯೌವನಕಾಲದಲ್ಲಿ ಸಂತಾನವಾದಾಗಲೇ ಮಾತಾಪಿತೃಗಳು ಹಿಡಿಯಲಾರದ ಸಂತೋಷವನ್ನು ಹೊಂದುವುದು ಸಹಜವಾಗಿರುವಾಗ ವೃದ್ಧಾಪ್ಯದಲ್ಲಿ ಸುಪುತ್ರೋದಯವಾದ ಮೇಲೆ ಆ ದಂಪತಿಗಳ ಸಂತೋಷವಷ್ಟಿಷ್ಟೆಂದು ಹೇಳಲಾರಿಗೆ ಸಾಧ್ಯ? ಆ ಜನ್ಮೋತ್ಸವ ದಿವಸದಲ್ಲಿ ಸದ್ಬ್ರಾಹ್ಮಣ ಬೃಂದದಿಂದಲೂ, ಮಿತ್ರಾಮಾತ್ಯ-ಬಂಧುವರ್ಗದಿಂದಲೂ ಒಡಗೂಡಿ, ಪರಮಾನಂದದಿಂದ ಯಥಾವಿಧಿಯಾಗಿ ಜಾತಕರ್ಮಾದಿಗಳನ್ನು ಜರುಗಿಸಿ, ಜನ್ಮರಾಶಿಯನ್ನು ಹಿಡಿದು 'ಭ'ಕಾರವು ಮೊದಲಿರುವಂತೆ 'ಭೋಜ' ನೆಂಬ ನಾಮಕರಣವನ್ನು ಮಾಡಿಸಿದನು. ಅನಂತರ ಕ್ರಮಕ್ರಮವಾಗಿ ಶುಕ್ಲಪಕ್ಷದ ಚಂದ್ರನಂತೆ ಅಭಿವೃದ್ಧಿ ಹೊಂದುತ್ತಲಿರುವ ಬಾಲಕನನ್ನು ದಂಪತಿಗಳಿರ್ವರೂ ಅತ್ಯಂತ ಪ್ರೀತಿಯಿಂದ ಸಾಕುತ್ತಿದ್ದರು. ಚಿರಕಾಲಕ್ಕೆ ಆಗದೆ ಆದ ಸಂತಾನವಾದುದರಿಂದ ಇತರ ಕಾರ್ಯಗಳನ್ನು ಬಿಟ್ಟು ಅಹರ್ನಿಶಿಯೂ ಪುತ್ರನನ್ನು ಮುದ್ದಿಸುವುದರಿಂದಲೇ ತಂದೆತಾಯಿಗಳು ಕೃತಾರ್ಥರಾಗುತ್ತಿದ್ದರು. ಭೋಜನು ದಿನದಿನಕ್ಕೆ

ಪ್ರವರ್ಧಮಾನನಾಗಿ ಷೋಡಶ ಕಲಾಭರಿತನಾದ ಚಂದ್ರನಂತೆ ಪ್ರಕಾಶಿಸುತ್ತಿ ದನು ಬಾಲನ ಮನೋಹರವಾದ ರೂಪ-ತೇಜಸ್ಸನ್ನು ನೋಡಿದ ಮಾತ್ರವೆ ಭವಿಷ್ಯತ್ಕಾಲದ ಅಭ್ಯುನ್ನತಿಯು ತಾನಾಗಿ ವ್ಯಕ್ತಪಡುತ್ತಿದ್ದಿತು. ತಿಳಿದೂ ತಿಳಿಯದ ಮುದ್ದುಮುದ್ದು ಚೇಷ್ಟೆಗಳೂ, ಬಂದೂ ಬಾರದ ಮುದ್ದುಮುದ್ದು ತೊದಲು ನುಡಿಗಳೂ ತಂದೆತಾಯಿಗಳನ್ನು ಮಾತ್ರವಲ್ಲದೆ, ಎಲ್ಲರ ಮನವನ್ನೂ ಆಕರ್ಷಣ ಮಾಡುತ್ತಿದ್ದುವು. ಭೋಜನಿಗೆ ಐದು ವರ್ಷಗಳು ತುಂಬಿದುವು ವೃದ್ಧನಾದ ಸಿಂಧುಲನಿಗೆ ಅವಸಾನಕಾಲವು ಸಮೀಪಿಸಿತು. ಭೋಜನು ಇನ್ನೂ ಕಾರ್ಯಾಕಾರ್ಯಗಳನ್ನು ತಿಳಿದುಕೊಳ್ಳಲಾರದ ಬಾಲ್ಯಾವಸ್ಥೆಯುಳ್ಳವ ನಾಗಿ ಇರುವುದನ್ನು ನೋಡಿ, ಅವನ ಪುರೋಭಿವೃದ್ಧಿಯನ್ನು ಕುರಿತು ಮಾತ್ರ ವಿಚಾರ ಮಾಡುತ್ತಿದ್ದನು. ಪ್ರತಿ ಮನುಷ್ಯನೂ ಅವನವನ ಅದೃಷ್ಟಪ್ರಕಾರ ಸುಖದುಃಖಗಳನ್ನು ಹೊಂದುವನೆಂದು ಅರಿತವನಾದರೂ, ಪ್ರೇಮಪಾಶಬಂಧನ ದಿಂದ ಮನಸ್ಸನ್ನು ನಿಲ್ಲಿಸಲಾರದೆ, ಒಂದಾನೊಂದು ದಿನ ಜ್ಯೋತಿಷಶಾಸ್ತ್ರಜ್ಞ ನನ್ನು ಕರೆಯಿಸಿ ಭೋಜನ ಜಾತಕವನ್ನು ತೋರಿಸಿದನು. ಆತನ ಜನ್ಮ ಕಾಲ ಗ್ರಹಸಂಪತ್ತಿಯನ್ನು ನೋಡಿ ಆಯಾ ಭಾವಗಳನ್ನು ನಿರ್ಣಯಿಸಿ ಜ್ಯೋತಿಷ್ಕನು ಹೀಗೆ ಹೇಳಿದನು:—

ಈ ಜಾತಕನು ದೀರ್ಘಾಯುಷ್ಮಂತನು ಪ್ರತಾಪ, ಧೈರ್ಯ, ಶೌರ್ಯ, ಪಾಂಡಿತ್ಯ ಮುಂತಾದ ಅನೇಕ ಸುಗುಣಗಳನ್ನು ಪಡೆದು, ಹಲವು ವರ್ಷಗಳು ರಾಜ್ಯಪರಿಪಾಲನ ಮಾಡುವನು. ಈತನ ಪಾಲನೆಯಲ್ಲಿ ಪ್ರಜೆಗಳು ಒಬ್ಬರಾ ದರೂ ಮೂರ್ಖರಾಗಲಿ, ದುರ್ಮಾರ್ಗಿಗಳಾಗಲಿ ಇರಲಾರರು. ಎಲ್ಲರೂ ವಿದ್ಯಾವಂತರಾಗಿಯೂ, ಧನವಂತರಾಗಿಯೂ ಇರುವರು. ಬಾಲ್ಯದಲ್ಲಿಮಾತ್ರ ಒಂದು ಗಂಡಾಂತರವಿರುವುದು, ಆದರೂ ಅದು ಒಬ್ಬ ಪುಣ್ಯಾತ್ಮನಿಂದ ದೂರ ವಾಗಿ ಹೋಗುವುದು. ಸುಖದುಃಖಗಳು ಕರ್ಮಾನುಸಾರವಾಗಿ ಉಂಟಾಗು ವುವು. ಅವುಗಳನ್ನು ಕುರಿತು ಮೂಢನು ಮಾತುಮಾತಿಗೂ ಚಿಂತಿಸುವನು, ವಿದ್ವಾಂಸನು ಮನಸ್ಸಿನಲ್ಲಿ ವಿಕಾರಹೊಂದದೆ, ಅವುಗಳನ್ನು ಒಂದೇ ರೀತಿಯಾ ಗಿಯೇ ತಿಳಿದು ವರ್ತಿಸುವನು. ಆದುದರಿಂದ ಇದಕ್ಕಾಗಿ ಚಿಂತಿಸಿ ಲಾಭ

ವೇನಿರುವುದು ?—ಎಂದು ಮೊದಲಾಗಿ ಜೋಯಿಸನು ನುಡಿದ ನುಡಿಗಳನ್ನು ಕೇಳಿ ಧೈರ್ಯದಿಂದ ಆತನನ್ನು ಸನ್ಮಾನಿಸಿ ಬೀಳ್ಕೊಟ್ಟನು.

ತರುವಾಯ ಸಿಂಧುಲನು ಭೋಜನ ರೂಪಲಾವಣ್ಯಾದಿಗಳನ್ನು ನೋಡುತ್ತ ಮಹಾ ಸಂತೋಷ ಸಮುದ್ರದಲ್ಲಿ ಮುಳುಗಿ ತೇಲುತ್ತಿದ್ದನು. ಆದರೂ ವೃದ್ಧನಾದುದರಿಂದ ಅವನ ಮನಸ್ಸು ಪರಿಪಕ್ವವಾಗಿ ಸಂಸಾರದಿಂದ ವಿರಕ್ತವಾಗಲೆಳಸಿತು. ಹಾಗೂ ಮುಂದೆ ಈ ರಾಜ್ಯಭಾರವನ್ನು ವಹಿಸಿ ಪ್ರಜಾಪಾಲಕನಾಗಿ ಧರ್ಮಮಾರ್ಗವನ್ನತಿಕ್ರಮಿಸದೆ ನಡೆಯಲು ಸಮರ್ಥನಾರೆಂದು ವಿಚಾರಮಾಡದೆ ಹೋಗಲಿಲ್ಲ. ಈತನಿಗೆ ಕೇವಲ ಸಮರ್ಥನೂ, ಮಹಾವೀರನೂ ಆದ ಮುಂಜನೆಂಬ ತಮ್ಮನಿರುವುದರಿಂವ ಅವನಿಗೆ ರಾಜ್ಯಾಧಿಪತ್ಯವನ್ನೊಪ್ಪಿಸಲು ಒಮ್ಮೆ ನಿಶ್ಚಯಿಸುವನು. ಆದರೆ ಅವನ ಪ್ರವರ್ತನೆಯು ಅನುಚಿತವಾಗಿದ್ದುದರಿಂದ ಹಾಗೆ ಮಾಡಲು ಮನಸ್ಸು ಒಂದೊಂದು ಸಲ ಹಿಂತೆಗೆಯುತ್ತಿದ್ದಿತು.

ಒಂದಾನೊಂದು ದಿನ ಬುದ್ಧಿಸಾಗರನೇ ಮೊದಲಾದ ಮುಖ್ಯಾಮಾತ್ಯರನ್ನು ಬರಮಾಡಿಕೊಂಡು ಏಕಾಂತದಲ್ಲಿ ಹೀಗೆ ಆಲೋಚಿಸಿದನು —"ಮಂತ್ರಿವರ್ಯರೇ, ನಮ್ಮ ಪೂರ್ವಜರೆಷ್ಟೋಜನ ನೀತಿಮಾರ್ಗವನ್ನತಿಕ್ರಮಿಸದೆ ಪ್ರಜೆಗಳಲ್ಲಿ ದಯೆದೋರಿ, ಮಾನಧನರಾಗಿ ರಾಜ್ಯವನ್ನು ಪಾಲಿಸಿ, ಕೀರ್ತಿಶೇಷರಾದ ವೃತ್ತಾಂತವನ್ನು ನೀವು ತಿಳಿದೇ ಇರುವಿರಿ. ನಾನೂ ಸಹ ನಿಮ್ಮ ಸಾಹಾಯದಿಂದ ಶಕ್ತ್ಯನುಸಾರ ಪೂರ್ವೀಕರ ಮಾರ್ಗವನ್ನು ಅನುಸರಿಸಿಯೇ ಇದುವರೆಗೆ ಅಧರ್ಮಕ್ಕವಕಾಶವೀಯದಂತೆ ಪ್ರಜೆಗಳನ್ನು ಪಾಲಿಸಿದೆನು. ಪಕ್ಕತ, ನನಗೆ ಕೇವಲ ವಾರ್ಧಕ್ಯವು ಸಂಭವಿಸಿರುವುದರಿಂದ ಈ ರಾಜ್ಯಭಾರವನ್ನು ವಹಿಸಲಾರದಿರುವೆನು. ಭೋಜನಾದರೋ, ಯುಕ್ತಾಯುಕ್ತವನ್ನರಿಯದ ಬಾಲನು. ಕೆಲವು ಕಾಲ ಇತರರ ವಶದಲ್ಲಿದ್ದು ಸರ್ವವಿಷಯಗಳಲ್ಲಿಯೂ ವೃದ್ಧಿಗೆ ಬರಬೇಕಾಗಿರುವುದು. ನನ್ನ ಸಹೋದರನಾದರೋ, ಬಹಳ ಬಲಶಾಲಿಯೂ, ಕ್ರೂರಸ್ವಭಾವದವನೂ ಆಗಿರುವುದರಿಂದ ಯಾವ ದುರ್ಮಾರ್ಗಕಾರ್ಯಕ್ಕೂ ಹಿಂಡೆಗೆಯನು. ರಾಜ್ಯ ಕೋಶವೆಂದಿಗೆ ತನ್ನ ಕರಗತವಾದೀತೆಂದು ರಂಧ್ರಾ

ನ್ವೇಷಣ ಮಾಡುತ್ತ ಸಮಯ ನಿರೀಕ್ಷಣೆಯಲ್ಲಿರುವನು. ಇವನಿಗೆ ರಾಜ್ಯವನ್ನು ಕೊಡದೆ ಭೋಜನಿಗೆ ಪಟ್ಟಾಭಿಷೇಕಮಾಡಿದರೆ, ಜನರು—"ಸಿಂಧುಲನು ದ್ರೋಹ ಬುದ್ಧಿಯಿಂದ ತಮ್ಮನಿಗೆ ಪಟ್ಟಾಭಿಷೇಕಮಾಡದೆ ಪುತ್ರ ಪ್ರೇಮದಿಂದ ಬಾಲನಾದರೂ ಭೋಜನಿಗೇ ರಾಜ್ಯವನ್ನು ವಹಿಸಿದನು" ಎಂದು ಮೊದಲಾಗಿ ದೂರುವರು. ದೂಷಿಸಿದರೂ ದೂಷಿಸಲೆಂದು ವತ್ಸ ಭೋಜನಿಗೇ ಪಟ್ಟಾಭಿಷೇಕ ಮಾಡಿದರೆ ಮುಂಜನು ರಾಜ್ಯಾಭಿಲಾಷಿಯಾಗಿರುವುದರಿಂದ ವಿಷಪ್ರಾಶನ ಮಾಡಿಸುವುದರಿಂದಲೋ, ನದಿಯಲ್ಲಿ ತಳ್ಳಿಸುವುದರಿಂದಲೋ ತಲೆಯನ್ನು ಕತ್ತರಿಸುವುದರಿಂದಲೋ ಯಾವ ವಿಧದಿಂದಲಾದರೂ ಭೋಜನನ್ನು ಕೊಲ್ಲಿನದೆ ಬಿಡನು. ಆಗ ಈ ರಾಜ್ಯವನ್ನು ಕೊಟ್ಟುದು ವ್ಯರ್ಥವಲ್ಲದೆ ಪುತ್ರಹಾನಿಯಾಗಿ ವಂಶವು ನಾಶವಾಗುವುದು. ರಾಜ್ಯದಾಶೆಯು ಎಂತಹ ದುಸ್ಸಹವಾದ ಕಾರ್ಯವನ್ನಾದರೂ ಮಾಡಿಸದಿರುವುದೇ? ಆಶೆಯೇ ಅಲ್ಲವೆ ಪಾಪಕ್ಕಾದಿಕಾರಣವು? ಕ್ರೋಧ, ದ್ವೇಷ ಇವುಗಳು ಆಶೆಯಿಂದಲೇ ಉಂಟಾಗುವವು. ಆಶೆಯಿಂದ ಕೋಪ, ಕೋಪದಿಂದ ದುರ್ಬುದ್ಧಿ; ದುರ್ಬುದ್ಧಿಯಿಂದ ಎಂತಹ ವಿದ್ವಾಂಸನಾದರೂ ನರಕವನ್ನು ಹೊಂದದಿರಲಾರನು. ಆಶಾಪಾಶ ಬದ್ಧನಾದ ನರನು ತಾಯಿಯನ್ನಾಗಲಿ, ತಂದೆಯನ್ನಾಗಲಿ, ಗುರುವನ್ನಾಗಲಿ, ಕುಮಾರನನ್ನಾಗಲಿ, ಮಿತ್ರನನ್ನಾಗಲಿ, ಪ್ರಭುವನ್ನಾಗಲಿ, ಒಡಹುಟ್ಟಿದವನನ್ನಾಗಲಿ ಕನಿಕರವಿಲ್ಲದೆ ಕೊಲ್ಲಲು ಹಿಂತೆಗೆಯುವುದಿಲ್ಲ. ಆದುದರಿಂದ ಈಗ ಮುಂಜನಿಗೇ ರಾಜ್ಯವನ್ನು ಒಪ್ಪಿಸುವುದು ಯುಕ್ತವಾಗಿರುವುದು. ಹೀಗೆ ಮಾಡುವುದರಿಂದ ಭೋಜನು ಸಜೀವಿಯಾಗಿ ಮುಂಜನ ಕಾಲಾನಂತರವಾದರೂ ರಾಜ್ಯವನ್ನು ಹೊಂದಿ ಸುಖಿಸುವನು.—ಎಂದು ಸಕಾರಣವಾಗಿ ನುಡಿದ ಸಿಂಧುಲನ ಮಾತಿಗೆ ಮಂತ್ರಿಗಳೆಲ್ಲರೂ ಅನುಮತಿಸಿದರು. ತರುವಾಯ ಸಿಂಧುಲನು ಮುಂಜನನ್ನು ಕರೆಸಿ, ಗೌರವದಿಂದ ಹತ್ತಿರ ಬರಮಾಡಿ—ತಮ್ಮನೇ, ನಾನು ವೃದ್ಧನಾದೆನು; ಇನ್ನು ಮುಂದೆ ಈ ರಾಜ್ಯಭಾರವನ್ನು ಭರಿಸಲಾರೆನು. ರಾಜ್ಯತಂತ್ರದಲ್ಲಿ ನೀನು ಅಸಾಧಾರಣವಾದ ಶಕ್ತಿಯುಳ್ಳವನಾಗಿರುವೆ; ಆದುದರಿಂದ ಸರ್ವ ರಾಜ್ಯಾಧಿಪತ್ಯವನ್ನೂ ನಿನ್ನ ಸ್ವಾಧೀನಪಡಿಸುವೆನು. ಭೋಜನು ಏನನ್ನೂ ಅರಿಯದ ಹಸುಗೂಸು. ಇವನನ್ನು ನಿನ್ನ ಮಗನೆಂದು ಭಾವಿಸಿ, ವೃದ್ಧಿಗೆ ತರುವ ಭಾರವು ನಿನ್ನದಾಗಿರುವುದು ಎಂದು ಕೆಲವು ನೀತಿ ವಾಕ್ಯಗ

ಳನ್ನುಪದೇಶಿಸಿ ಪಟ್ಟಾಭಿಷೇಕಮಾಡಿದನು. ತರುವಾಯ ಸಿಂಧುಲನು ಶಾಂತ ಚಿತ್ತನಾಗಿ, ಆತ್ಮಜ್ಞಾನಿಯಾಗಿ ಭಗವಂತನನ್ನು ಧ್ಯಾನಿಸುತ್ತ ಸ್ವಲ್ಪಕಾಲದಲ್ಲಿಯೇ ಪರಲೋಕಗತನಾದನು. ರಾಜನ ಮರಣದಿಂದ ಅಂತಃಪುರವೆಲ್ಲವೂ ರೋದನಧ್ವನಿಯಿಂದ ತುಂಬಿಹೋಯಿತು. ಪ್ರಜೆಗಳೆಲ್ಲರೂ ದುಃಖಸಮುದ್ರದಲ್ಲಿ ಮುಳುಗಿಹೋದರು. ಮುಂಜನೂ ಸಹ ದುಃಖಿತನಾಗಿ ಭೋಜನನ್ನು ಮುಂದಿಟ್ಟುಕೊಂಡು, ದಹನಾದ್ಯಪರಕರ್ಮಗಳನ್ನೆಲ್ಲ ಕ್ರಮವಾಗಿ ನೆರವೇರಿಸಿ, ಪರಮಾನಂದಭರಿತನಾಗಿ ಸಿಂಹಾಸನವನ್ನಧಿಷ್ಠಿಸಿದನು. ಮುದ್ರಾಧಿಕಾರವು ಲಭಿಸಿದಕೂಡಲೆ ಮದೋನ್ಮತ್ತನಾಗಿ ಪ್ರಧಾನಮಂತ್ರಿಗಳಲ್ಲ ಕೆಲವರನ್ನು ನಿಷ್ಕಾರಣವಾಗಿ ಅವರ ಪದವಿಯಿಂದ ತೊಲಗಿಸಿ ಆ ಸ್ಥಾನದಲ್ಲಿ ತನಗಿಷ್ಟರಾದ ದುರ್ಮಂತ್ರಿಗಳನ್ನು ಸೇರಿಸಿಕೊಂಡನು. ಮುಂಜನು ಚಿಕ್ಕಂದಿನಿಂದಲೂ ಲೋಭಿಯೂ, ಕ್ರೂರಿಯೂ, ಸ್ವಾರ್ಥಪರನೂ ಆದುದರಿಂದ ತನ್ನ ಇಷ್ಟಾನುಸಾರ ನಿರಂಕುಶವಾಗಿ ಪ್ರಜೆಗಳ ಮೇಲನ್ನರಿಯದೆ ರಾಜ್ಯಭಾರವನ್ನು ಮಾಡುತ್ತಿದ್ದನು ಮೊದಲಿನ ರಾಜನಿಬಂಧನೆಗಳನ್ನೆಲ್ಲ ಅತಿಕ್ರಮಿಸಿ ಹೊಸಹೊಸ ನಿಬಂಧನೆಗಳನ್ನು ರೂಢಿಯಲ್ಲಿ ತಂದನು. ಪ್ರಜೆಗಳಿಗೆ ಮೊದಲುಮೊದಲು ಕಷ್ಟವಾಗಿ ಕಂಡರೂ ಕ್ರಮವಾಗಿ ಅದು ಒಗ್ಗಿಹೋಯಿತು ಹೀಗೆ ಕೆಲವುಕಾಲ ಕಳೆಯಲಾಗಿ ಭೋಜನು ಎಂಟು ವರುಷದವನಾದನು. ಸಂಸ್ಕೃತವಿದ್ಯಾಭ್ಯಾಸಕ್ಕೆ ತಕ್ಕ ಕಾಲವೆಂದರಿತು ಮುಂಜನು ಭೋಜನಿಗಾಗಿ ಸಂಸ್ಕೃತ ಪಾಠಶಾಲೆಯನ್ನೇರ್ಪಡಿಸಿ ಅಲ್ಲಿ ಅನೇಕ ಶಾಸ್ತ್ರವೇತ್ತರಾದ ಪಂಡಿತರನ್ನು ಉಪಾಧ್ಯಾಯರನ್ನಾಗಿ ನಿಯಮಿಸಿ, ಯುಕ್ತಕಾಲದಲ್ಲಿ ಯಥಾವಿಧಿಯಾಗಿ ಉಪನಯನವನ್ನು ಮಾಡಿಸಿ, ವಿದ್ಯಾಭ್ಯಾಸಮಾಡಿಸಲು ಪಾಠಶಾಲೆಗೆ ಕಳುಹಿಸಿದನು. ಭೋಜನು ಅಮಿತ ಬುದ್ಧಿಶಾಲಿಯಾದುದರಿಂದ ಉಪಾಧ್ಯಾಯರೊಂದುಸಾರಿ ಹೇಳಿದ ಮಾತ್ರವೇ ನಿರಾಯಾಸವಾಗಿ ಪಾಠವನ್ನು ಗ್ರಹಿಸುತ್ತಿದ್ದನು. ಇವನ ಬುದ್ಧಿಚಾತುರ್ಯವೂ, ಧಾರಣಾಶಕ್ತಿಯೂ, ವಿಧೇಯತೆಯೂ, ಶ್ರದ್ಧೆಯೂ, ಸನ್ಮಾರ್ಗಪ್ರವರ್ತನೆಯೂ ಪ್ರಪಂಚವನ್ನೇ ಮರುಳುಮಾಡಿತು. ಉಪಾಧ್ಯಾಯರೆಲ್ಲರೂ ಪ್ರೇಮದಿಂದ ವಿದ್ಯೆಗಳನ್ನೆಲ್ಲ ಕಲಿಸುತ್ತಿದ್ದರು. ಹೀಗೆ ಸ್ವಲ್ಪ ಕಾಲದಲ್ಲಿಯೇ ವೇದಾಧ್ಯಯನದಲ್ಲಿಯೂ, ಸಾಹಿತ್ಯದಲ್ಲಿಯೂ, ಅಲಂಕಾರ, ತರ್ಕ, ವ್ಯಾಕರಣ, ವೈದ್ಯಶಾಸ್ತ್ರಗಳಲ್ಲಿಯೂ, ಶರೀರ-ವ್ಯಾಯಾಮ ಕ್ರೀಡೆಗಳಲ್ಲಿಯೂ

ವಿಶೇಷ ನೈಪುಣ್ಯವನ್ನು ಹೊಂದಿ, ಪುರುಷರೂಪದಿಂದ ಭೂಲೋಕದಲ್ಲಿ ಅವತರಿಸಿದ ಸರಸ್ವತಿಯೋ ಎಂಬಂತೆ ಸಲಕ ವಿದ್ಯೆಗಳಲ್ಲಿಯೂ, ಭೋಜನು ಪಾರಂಗತನಾಗಿ ಹದಿಮೂರು-ಹದಿನಾಲ್ಕು ವರುಷ ವಯಸ್ಸಿನವನಾದನು.

ಒಂದು ದಿವಸ ಮುಂಜನು ಭೋಜನ ವಿದ್ಯಾಕೌಶಲ್ಯವನ್ನು ಪರೀಕ್ಷಿಸಲೆಳಸಿ, ಪಾಠಶಾಲೆಗೈದಿ ಕೇವಲ ಪ್ರೀತಿಪುರಸ್ಸರವಾಗಿ ಹತ್ತಿರಕ್ಕೆ ಕರೆದು ಪಂಡಿತರ ಸಮಕ್ಷಮ ಶಾಸ್ತ್ರವಿಷಯವೊಂದನ್ನು ಪ್ರಶ್ನೆಮಾಡಿದನು. ಭೋಜನು ಆ ವಿಷಯವನ್ನು ಗ್ರಹಿಸಿ, ಪರಂಪರೆಯಾಗಿ ನಾನಾರೀತಿಯಿಂದ ಸಾವಧಾನ ಹೇಳಿ ವಿದ್ಯಾಗುರುಗಳ ಮನಸ್ಸನ್ನು ಅತ್ಯಾನಂದಗೊಳಿಸಿದನು ಮುಂಜನು ಅವನು ಕೊಡುವ ಉತ್ತರದ ಅರ್ಥವನ್ನೇ ಗ್ರಹಿಸಲಾರದೆ ಹೋದನು. ಆ ಬಳಿಕ ಮುಂಜನು ಗೃಹವನ್ನು ಸೇರಿ ಭೋಜನ ಬುದ್ಧಿಜಾತಿಗಾಶ್ಚರ್ಯಪಡುತ್ತ ಏಕಾಂತದಲ್ಲಿ ಹೀಗೆ ಆಲೋಚನೆಮಾಡಿದನು—"ಭೋಜನು ಚಿಕ್ಕಪ್ರಾಯದಲ್ಲಿಯೇ ಸಕಲ ವಿದ್ಯಾಪಾರಂಗತನಾಗಿರುವನು. ಬಾಲ್ಯದಲ್ಲಿಯೇ ಇಷ್ಟು ಬುದ್ಧಿಬಲವಿರುವವನು ಪ್ರೌಢವಯಸ್ಸಿನಲ್ಲಿ ಹೇಗಿರುವನೆಂದೂಹಿಸಲಾದೀತು? ಇಂತಹ ಬುದ್ಧಿಶಾಲಿಯು ನನ್ನನ್ನು ಯಾವ ರೀತಿಯಲ್ಲಾಗಲಿ ಮೋಸಮಾಡಿ ರಾಜ್ಯಕೋಶವನ್ನು ಅಪಹರಿಸದಿರುವನೇ? ಸರ್ವಸಂಪದಗಳೂ ಭೋಜನ ಅಧೀನವಾದ ಬಳಿಕ ನನ್ನ ಮುಖವನ್ನು ನೋಡಿ ನನ್ನನ್ನು ಆದರಿಸುವವರಾರಿರುವರು? ದ್ರವ್ಯವಿರುವವರೆಗಲ್ಲವೆ ಎಂತಹ ಅಲ್ಪನಾದರೂ ಒಬ್ಬ ಪ್ರಮುಖನಾಗಿ ತೋರುವನು? ಧನಸಂಪತ್ತಿ, ರಾಜ್ಯೈಶ್ವರ್ಯ ಮೊದಲಾದುವಿಲ್ಲದಮೇಲೆ ಜೀವಶ್ರುವದಂತೆ ಭಾವಿಸುವರು. ಆದುದರಿಂದ ಎಲ್ಲಾ ಕಾಲವೂ ನಿರಾತಂಕವಾಗಿ ರಾಜ್ಯವನ್ನನುಭವಿಸುವ ಉಪಾಯವನ್ನಾಲೋಚಿಸಬೇಕು ಶರೀರದ ಮೇಲೆ ಆಶೆಯನ್ನು ತ್ಯಜಿಸಿ ಜಾಣನಾಗಿ ಪ್ರಯತ್ನದಿಂದ ಕಾರ್ಯವನ್ನು ಮಾಡುವವನಿಗಾವುದಸಾಧ್ಯ? ಅತಿ ದಾಕ್ಷಿಣ್ಯವೂ, ಮಾತುಮಾತಿಗೆ ಸಂದೇಹವೂ, ಪರರು ನಿಂದಿಸುವರೆಂಬ ಭಯವೂ, ಇರುವವನು ಎಂದೂ ಸಂಪದಗಳನ್ನು ಹೊಂದಲಾರನು. ಐಶ್ವರ್ಯವನ್ನು ಹೊಂದಲೆಳಸಿವರೆ ವಿಶೇಷ ಜಾಗರೂಕತೆಯಿಂದ ಕೊಡಬೇಕಾದವರಿಗೆ ಕೊಟ್ಟು, ತೆಗೆಸುಕೊಳ್ಳಬೇಕಾದವರಿಂದ ತೆಗೆದುಕೊಂಡು ಯಾವ ಕೆಲಸವನ್ನೆಷ್ಟು ಜಾಗ್ರತೆ ಮಾಡಬಹುದೋ, ಹಾಗೆ ಆಯಾ

ಕಾಲಕ್ಕೆ ಸರಿಯಾಗಿ ಆಯಾ ಕೆಲಸವನ್ನು ನೆರವೇರಿಸಬೇಕಾದುದು ಮುಖ್ಯ ವೆಂದು ಗಮನಿಸಬೇಕು. ಅಲ್ಲದಿದ್ದರೆ ಕಾಲದೋಷದಿಂದ ಕಾರ್ಯಗಳೆಲ್ಲ ವಿಪರೀ ತವಾಗಿ ಪರಿಣಮಿಸುವುವು. ಪೌರುಷವಿರುವವನಾವಕಾರ್ಯದಲ್ಲಿಯೂ ಅಗೌರ ವವನ್ನೇ ಮುಂದಿಟ್ಟುಕೊಂಡು ಗೌರವವನ್ನು ಹಿಂದಿಟ್ಟುಕೊಂಡು ತನ್ನ ಕಾರ್ಯ ಸಾಧನ ಮಾಡಿಕೊಳ್ಳಬೇಕಾಗಿರುವುದು. ಜಾಗರೂಕತೆಯುಳಿದು ಕಾರ್ಯವನ್ನು ಭಂಗಮಾಡಿಕೊಳ್ಳುವುದಕ್ಕಿಂತಲೂ, ಮೌಢ್ಯವಾವುದುಂಟು ? ಬುದ್ಧಿವಂತನು ಅಲ್ಪಕ್ಕಾಗಿ ಹೆಚ್ಚು ವ್ಯಯಮಾಡಿಕೊಳ್ಳದೆ, ಆ ಅತ್ಯಲ್ಪದಲ್ಲಿಯೇ ಅಧಿಕವಾಗಿ ಸಂಪಾದಿಸುವನು. ಇದು ಹೀಗಿರಲಾಗಿ ಕಾರ್ಯಗೌರವವುಳ್ಳ ಪುರುಷನು ಶತ್ರು ವನ್ನೂ, ರೋಗವನ್ನೂ ಹುಟ್ಟುವಾಗಲೇ ನಾಶಪಡಿಸಬೇಕು. ಸುಮ್ಮನಿರಲಾಗಿ ಆ ಶತ್ರುವೂ, ರೋಗವೂ ಎಷ್ಟು ಬಲಾಢ್ಯನನ್ನಾಗಲಿ ಪ್ರಾಣಾಂತದವರೆಗೂ ಬಾಧಿಸದಿರಲಾರದು. ಪ್ರಕೃತ ಭೋಜನು ಪ್ರಬಲ ಶತ್ರುವಾಗಿರುವನು. ಉನ್ನತದೆಶೆಗೆ ಬರುವುದಕ್ಕೆ ಮುಂಚೆಯೇ ಇವನನ್ನು ನಾಶಮಾಡುವುದು ಮಂತ್ರಜ್ಞನಿಗೆ ಕರ್ತವ್ಯವು. ವಿಷವೃಕ್ಷವನ್ನೂ,ಶತ್ರುವನ್ನೂ ಅಂಕುರದಲ್ಲಿಯೇ ಛೇದಿಸಿಬಿಡಬೇಕೆಂದು ಗುರುಹಿರಿಯರು ಹೇಳುವರಲ್ಲವೆ ? ಆದುದರಿಂದ ಈಗ ಭೋಜನನ್ನು ನಾಶಮಾಡುವ ಪ್ರಯತ್ನಮಾಡಬೇಕು" ಎಂದಾಲೋಚಿಸಿ ಏನೊಂದೂ ತೋಚದೆ ಹುಚ್ಚನಂತೆ ಆ ಹಗಲು ಮೂರು ಜಾವದವರೆಗೂ ಆಹಾರವನ್ನು ಕೂಡ ತೊರೆದು ಚಿಂತಾಸಮುದ್ರದಲ್ಲಿ ಮುಳುಗುತ್ತ ತೇಲುತ್ತ ವಂಗದೇಶಾಧೀಶನೂ, ಮುಖ್ಯಮಂತ್ರಿಯೂ ಆದ ವತ್ಸರಾಜನನ್ನು ಬರಮಾಡಿ ಕೊಂಡು ಹೀಗೆಹೇಳಿದನು—"ವತ್ಸರಾಜನೇ, ನೀನು ನನಗತ್ಯಂತ ಪ್ರಿಯನೂ, ಪ್ರಧಾನಮಂತ್ರಿಯೂ ಆಗಿರುವುದರಿಂದ ನನ್ನ ಸುಖದುಃಖಗಳಿಗೆ ಭಾಗಿಯಾಗಿ ರುವೆ. ಪ್ರಕೃತ ನನಗೆ ಬರಬಹುದಾದ ಮಹಾ ವಿಪತ್ತನ್ನು ತಪ್ಪಿಸಿ ನನ್ನನ್ನು ಕಾಪಾಡುವ ಸಮರ್ಥನು ಮತ್ತೊಬ್ಬನಿಲ್ಲವು. ಮಿತ್ರನ ಗುಣಗಳನ್ನು ದುಃಖ ಸಮಯದಲ್ಲಿ ಅಲ್ಲವೇ ಪರೀಕ್ಷಿಸುವುದು ? ಲೋಕದಲ್ಲಿ ರಾಜರು ಪ್ರಿಯರಾದ ಮಂತ್ರಿಗಳ ವಿಷಯದಲ್ಲಿ ಗೌರವವನ್ನು ಮಾತ್ರ ತೋರಿಸುವರು. ಆ ರಾಜ ರಿಂದ ಗೌರವಿಸಲ್ಪಡುವ ಮಂತ್ರಿಗಳಾದರೋ ತಮ್ಮ ಪ್ರಾಣಗಳನ್ನು ಕೊಟ್ಟಾ ದರೂ ರಾಜರನ್ನು ಕಾಪಾಡುವರು. ನೀನು ನನಗಂತರಂಗ ಮಿತ್ರನೂ, ಮಂತ್ರಿ ಯೂ ಆಗಿರುವುದರಿಂದ ನಿನಗೆ ರಹಸ್ಯ ವಿಚಾರವನ್ನು ತಿಳಿಸುವೆನು. ಮಂತ್ರಿ

ಪರ್ಯಾ, ಈದಿನ ಅರ್ಧರಾತ್ರಿಯಲ್ಲಿ ಭೋಜನನ್ನು ರಥದಲ್ಲಿಕುಳ್ಳಿರಿಸಿಕೊಂಡ
ಒಂದು ಅರಣ್ಯಕ್ಕೆ ಕೊಂಡೊಯ್ದು ಅಲ್ಲಿ ಅವನ ಶಿರವನ್ನು ಛೇದಿಸಿ, ಆ ಶಿ
ಸ್ಸನ್ನು ಅಂತಃಪುರಕ್ಕೆ ತಂದು ನನಗೆ ತೋರಿಸಬೇಕು ಈ ಕೆಲಸವನ್ನು ಈಡೆ
ರಿಸಿದರೆ ನಿನ್ನ ಶ್ರಮೆಯನ್ನು ವ್ಯರ್ಥಮಾಡಲಾರೆನು. ನಿನ್ನ ಉಪಕಾರವನ್ನು
ಮರೆಯಲಾರೆನು ಕೋರಿದ ಗ್ರಾಮಗಳನ್ನು ಪಾರಿತೋಷಿಕವಾಗಿಕೊಡುವೆನು

ಹೀಗೆ ಹೇಳುವ ಅವನ ಘೋರವಾಕ್ಯಗಳು ಕರ್ಣಕಠೋರಗಳಾಗಿ ವತ್ಸ
ಪ್ರಾಣವೆಲ್ಲಿಯೋ ಪ್ರಯಾಣವಾದಂತಾಯಿತು. ಶಿಲಾಪ್ರತಿಮೆಯಂತೆ ನಿಶ್ಚೆ
ಷ್ಟಿತನಾಗಿ ನಿಂತು ಸ್ವಲ್ಪ ಕಾಲಾನಂತರ ಎಚ್ಚತ್ತು, ಹೀಗೆ ವಿಚಾರಮಾಡಲು
ಜ್ಜುಗಿಸಿದನು "ಅಕಟಕಟಾ! ಎಂತಹ ಮಾತುಗಳನ್ನು ಪಾಪಿಯಾ
ನಾನು ಕಿವಿಗಳಿಂದ ಕೇಳಬೇಕಾಯಿತು. ಈ ದುರ್ಬುದ್ಧಿಯು ಈತನಿಗೇಕೆ
ಉಂಟಾಯಿತು? ಭೋಜನನ್ನು ವಿರೋಧಿಸುವಂತೆ ದುರ್ಬೋಧೆಯನ್ನು ಮಾ
ಡುವ ಮಹಾ ಪಾಪಾತ್ಮನಾರೂ ಇರಲಾರನಲ್ಲವೇ? ಈ ಚಿಂತೆಯೇಕೆ?
ಈತನು ಜನ್ಮಾರಭ್ಯ ಪಾಪಕಾರ್ಯಗಳನ್ನೇ ಮಾಡಲೆಳಸುವನು ಎಷ್ಟೋ
ಘೋರಕಾರ್ಯಗಳಿಗೆ ಹಿಂದೆಗೆಯದ ಈ ಘಾತುಕನು ಪುತ್ರವಧೆಗೆ ಮಾತ್ರ
ಹೇಗೆ ಹಿಂದೆಗೆಯುವನು? ಆನೆಗಳನ್ನು ತಿನ್ನುವ ವೆಂಕಟಮ್ಮನಿಗೆ ಹೆಣಗ
ಪಿಂಡದ ಕೂಳಲ್ಲವೇ ಬೇಕು? ಛೀ! ಇಂತಹ ನೀಚನಬಳಿ ಸೇವೆಯಲ್ಲಿ ಇರು
ವುದೆಷ್ಟು ಪಾಪವು?" ಎಂದು ತನ್ನಲ್ಲಿ ತಾನು ಆಲೋಚಿಸಿ—"ಆಗಲಿ ಶಾಂತ
ವಚನದಿಂದ ಈತನ ದುರ್ಬುದ್ಧಿಯನ್ನು ಪೋಗೊಳಿಸುವೆನು" ಎಂದಾಲೋ
ಚಿಸಿ, ಮುಂಜನೊಡನೆ ಹೀಗೆ ಹೇಳಿದನು —

"ಮಹಾಪ್ರಭೂ, ನೀವು ಪ್ರಭುಗಳಾಗಿರುವುದರಿಂದ ಯಾವ ಕಾರ್ಯವ
ನ್ನಾಗಲಿ ಭೃತ್ಯನಿಗಾಜ್ಞಾಪಿಸಬೇಕಾದುದು ಮುಖ್ಯಧರ್ಮವು. ಆದರೂ ತಾವು
ಅಪ್ಪಣೆ ಕೊಡಿಸಿದ ಈಗಿನ ಕಾರ್ಯವನ್ನು ಕುರಿತು ವಿಜ್ಞಾಪಿಸುವ ಪ್ರತಿ ವಚನ
ವನ್ನು ತಪ್ಪಾಗಿ ತಿಳಿಯಕೂಡದೆಂದು ಪ್ರಾರ್ಥಿಸುತ್ತೇನೆ. ದೇವಾ, ಭೋಜನು
ಯಾವ ಪಾಪವನ್ನೂ ಅರಿಯದ ಹಸು ಕೂಸಲ್ಲವೇ? ಈತನಿಗೆ ಸೈನ್ಯವಾಗಲಿ,
ಬಲವಾಗಲಿ, ಪರಿವಾರವಾಗಲಿ, ಧನವಾಗಲಿ ಮತ್ತೆ ಯಾವ ಸಹಾಯವಾಗಲೀ

ಇಲ್ಲ. ಸಿಂಧುಲನು ಸಾಯುವಾಗ ರಾಜ್ಯವನ್ನೂ, ಭೋಜಕುಮಾರನನ್ನೂ ನಿನ್ನ ಸ್ವಾಧೀನಮಾಡಿ ಹೋಗಿರುವನು. ಯುಕ್ತಾ ಯುಕ್ತಗಳನ್ನರಿಯದೆ ಬಾಲ್ಯದಿಂದಲೂ ನಿನ್ನನ್ನು ತಂದೆಯಂತೆಭಾವಿಸಿ, ನಿನ್ನಲ್ಲಿ ಗುರುಭಾವವನ್ನೇ ತೋರಿಸುತ್ತ ವರ್ತಿಸುತ್ತಿರುವ ಭೋಜನು ನಿನ್ನಾಜ್ಞೆಯನ್ನು ಒಂದುವೇಳೆ ಯಾದರೂ ಅತಿಕ್ರಮಿಸುವವನಲ್ಲ. ಇಂತಹ ಗುಣವಂತನೂ, ವಿನಯವಂತನೂ, ವಿಧೇಯನೂ ಆದ ಪುತ್ರನನ್ನು ಕೊಲ್ಲಿಸಿ ಹೊಂದಬೇಕಾದ ಫಲವೇನು? ಮೊದಲು ಆಲೋಚನೆಯಿಲ್ಲದೆ ಒಂದು ಕಾರ್ಯವನ್ನು ಮಾಡಿ, ತರುವಾಯ ಪಶ್ಚಾತ್ತಾಪವನ್ನು ಹೊಂದುವುದು ಕೇವಲ ಮೂಢರ ಲಕ್ಷಣವಲ್ಲವೇ? ಯಾವ ಕಾರ್ಯದಿಂದ ನಷ್ಟವಿರುವುದು, ಎಂದು ಮೊದಲು ಮೊದಲೇ ಚೆನ್ನಾಗಿ ಆಲೋಚಿಸಿ ಲಾಭವಿರುವುದಾದರೆ ಮಾಡುವುದೂ, ನಷ್ಟವಿರುವುದಾದರೆ ಬಿಡುವುದೂ ಪ್ರಾಜ್ಞರ ಲಕ್ಷಣವು. ಪ್ರಯತ್ನ ಪೂರ್ವಕವಾಗಿ ಅವುಗಳ ಫಲವನ್ನು ತಿಳಿದು ಪ್ರವರ್ತಿಸಬೇಕು. ಆತುರದಿಂದ ಯಾವ ಕೆಲಸಮಾಡಿದರೂ ಅದರ ವಿಪರೀತ ಫಲವು ಜನ್ಮಾಂತರದವರೆಗೂ ಹೃದಯಶಲ್ಯವಾಗಿ ಬಾಧಿಸುವುದು. ಹೀಗೆಯೇ ಪೂರ್ವಕಾಲದಲ್ಲಿ ದೂರಾಲೋಚನೆ ಮಾಡದೆ ದುರಾಲೋಚನೆ ಮಾಡಿ, ತನ್ನ ಮುದ್ದು ಗಿಳಿಯನ್ನು ಅನ್ಯಾಯವಾಗಿ ಕೊಂದು, ತರುವಾಯ ಪಶ್ಚಾತ್ತಾಪ ಪಟ್ಟು ಪ್ರಾಣತ್ಯಾಗವನ್ನು ಸಹಾ ಮಾಡಲುಜ್ಜುಗಿಸಿದ ಒಬ್ಬಾನೊಬ್ಬ ರಾಜಪುತ್ರನ ಚರಿತ್ರೆಯನ್ನು ಕೇಳಿಲ್ಲವೇ? ಕೇಳು, ಸಂಗ್ರಹವಾಗಿ ಹೇಳುತ್ತೇನೆ:—

ಪಾಂಡ್ಯದೇಶವನ್ನಾಳುವ ವೀರಸೇನನೆಂಬ ರಾಜನಿಗೆ ಶೂರಸೇನನೆಂಬ ಒಬ್ಬ ಮಗನಿದ್ದನು. ಈತನ ಪ್ರಧಾನಮಂತ್ರಿಯಾದ ಸುಮಂತನಿಗೆ ಸುಬುದ್ಧಿಯೆಂಬ ಒಬ್ಬ ಪುತ್ರನಿದ್ದನು, ಈ ಶೂರಸೇನನೂ, ಸುಬುದ್ಧಿಯೂ ಬಾಲ್ಯದಿಂದಲೂ ಪರಸ್ಪರಾನುರಾಗವುಳ್ಳವರಾಗಿ ಒಬ್ಬರನ್ನೊಬ್ಬರು ಅಗಲದೆ ರಾಮಲಕ್ಷ್ಮಣರಂತೆ ಸಂಚರಿಸುತ್ತಿದ್ದರು. ಹೀಗಿರಲಾಗಿ ಒಂದುದಿನ ಇವರೀರ್ವರೂ ವಿಹಾರಾರ್ಥವಾಗಿ ಒಂದು ಅರಣ್ಯಕ್ಕೆ ಹೋದರು. ಆಗ ಬೇಸಿಗೆಯ ಕಾಲವಾದುದರಿಂದ ಸೂರ್ಯನು ಬಹು ತೀಕ್ಷ್ಣನಾಗಿ ಆಕಾಶಮಧ್ಯದಲ್ಲಿ ಪ್ರಜ್ವಲಿಸುತ್ತಿದ್ದನು. ಸುಬುದ್ಧಿ, ಶೂರಸೇನರಾಬಿಸಿಲಿನ ತಾಪವನ್ನು ಸಹಿಸಲಾರದೆ ದಾಹಪೀಡಿತರಾಗಿ ಒಂದು ಆಲದಮರದಡಿಯನ್ನು ಸೇರಿದರು. ರಾಜಪುತ್ರನಿಗೆ

ಬಾಯಾರಿಕೆಯು ದುಸ್ಸಹವಾಯಿತು. ಎಲ್ಲಿ ನೋಡಿದರೂ ಸಮೀಪದಲ್ಲಿ ಕೆರೆಯಾಗಲಿ, ಕೊಳವಾಗಲಿ, ಚಿಲುಮೆಯಾಗಲಿ, ನದಿಯಾಗಲಿ, ಯಾವುದೂ ಕಾಣಿಸಲಿಲ್ಲ. ರಾಜಕುಮಾರನಿಗೆ ಬಾಯಿ ಒಣಗಿಹೋಯಿತು, ಮಾತುಗಳು ತೊದಲುತೊದಲಾದವು, ಕಿವಿಗಳು ಮುಚ್ಚಿಹೋಗಿ ಇತರ ಶಬ್ದವು ಕೇಳಿಸದಂತಾಯಿತು. ಇನ್ನು ಸ್ವಲ್ಪ ಕಾಲ ಸುಮ್ಮನಿದ್ದರೆ ದಾಹಪೀಡೆಯಿಂದ ತಪ್ಪದೆ ಅವನಿಗೆ ಮರಣವಾಗುವ ಸೂಚನೆ ತೋರಿತು ಮಂತ್ರಿಕುಮಾರನು ಆತನನ್ನು ನೋಡಿ ದಿಗಿಲುಬಿದ್ದು ಎಲ್ಲಿಯಾದರೂ ತಿರುಗಿನೀರನ್ನು ತರುವೆನೆಂದು ಹೇಳಿ, ರಾಜಪುತ್ರನನ್ನು ಅಲ್ಲಿಯೇ ಬಿಟ್ಟು, ಅರಣ್ಯದಲ್ಲಿ ಜಲಾಶಯವನ್ನು ಹುಡುಕುತ್ತ ನಡೆದನು ಇಷ್ಟರಲ್ಲಿ ಇತ್ತ ಆಲದಮರದ ದೊಡ್ಡಕೊಂಬೆಯಿಂದ ಜೊಟಜೊಟನೆ ಜಲಬಿಂದುಗಳು ಉದುರಲಾರಂಭಿಸಿದವು. ರಾಜಪುತ್ರನು ವಿಶೇಷ ದಾಹಪೀಡಿತನಾಗಿದ್ದುದರಿಂದ ಜಲಬಿಂದುಗಳೆಲ್ಲಿಂದ ಹೇಗೆ ಬೀಳುವುವೆಂದು ವಿಚಾರಿಸದೆ ದರಿದ್ರನಿಗೆ ಧನನಿಕ್ಷೇಪವು ದೊರೆತಂತೆ ಸಂತೋಷಿಸಿ ಅಲ್ಲಿದ್ದ ಆಲದೆಲೆಯನ್ನೇ ದೊನ್ನೆಯಾಗಿ ಮಾಡಿಕೊಂಡು ಆ ಜಲಕಣಗಳನ್ನು ದೊನ್ನೆಯಲ್ಲಿ ಸಂಗ್ರಹಿಸುತ್ತಿದ್ದನು ನೀರು ಧಾರೆಯಾಗಿ ಬೀಳುತ್ತಿದ್ದುದರಿಂದ ಜಾಗ್ರತೆಯಾಗಿಯೇ ದೊನ್ನೆಯು ತುಂಬಿತು.

ಈ ರಾಜಪುತ್ರನು ಚಿಕ್ಕಂದಿನಿಂದಲೂ ಒಂದು ಗಿಳಿಯನ್ನು ಸಾಕುತ್ತಿದ್ದನು, ಅದು ಆಪ್ಯಾಯಮಾನವಾಗಿ ಮುದ್ದುಮುದ್ದಾಗಿ ಮಾತುಗಳನ್ನಾಡುತ್ತಿದ್ದುದರಿಂದ ಆ ನುಡಿಗಳನ್ನು ಕೇಳುತ್ತ ಆನಂದಿಸುತ್ತಿದ್ದನು. ಈ ಕಾರಣದಿಂದ ಯಾವಾಗಲೂ ಅದನ್ನು ಅಗಲಿರದೆ ತನ್ನ ಸಮೀಪದಲ್ಲಿಟ್ಟುಕೊಂಡಿರುತ್ತಿದ್ದನು. ಆ ಗಿಣಿಯ ಬುದ್ಧಿಜಾತಿಗೆ ಮೆಚ್ಚಿ ರಾಜಪುತ್ರನು ಅದನ್ನು ಪ್ರಾಣಪದಕದಂತೆ ಪೋಷಿಸುತ್ತಿದ್ದನು. ಆದುದರಿಂದ ವನವಿಹಾರ ಸಮಯದಲ್ಲಿಯೂ ಸಂಗಡಲೇ ಇದ್ದಿತು. ಹೀಗೆ ಸಮೀಪದಲ್ಲಿದ್ದ ಗಿಳಿಯು ದಾಹಪೀಡಿತನಾದ ರಾಜಪುತ್ರನು ನೀರಿನ ದೊನ್ನೆಯನ್ನು ಎತ್ತಿ ಕುಡಿಯಲುದ್ಯುಕ್ತನಾಗುವುದನ್ನು ಕಂಡು, ಥಟ್ಟನೆ ಆ ದೊನ್ನೆಯಮೇಲೆ ಹಾರಿ ಅದನ್ನು ಬೋರಲಾಗುವಂತೆ ಬೀಳಿಸಿ ನೀರನ್ನು ನೆಲದಪಾಲುಮಾಡಿತು.

ಆಗ ರಾಜಪುತ್ರನಮನಸ್ಸು ಹೇಗಿರಬಹುದು? ಪಿಪಾಸಾತುರನಾಗಿದ್ದು ಬಾಯಿಗೆ ಸಮೀಪಿಸಿದ ನೀರನ್ನು ನೆಲದಪಾಲು ಮಾಡಿದ ಆ ಗಿಳಿಯಮೇಲೆ

ಅತ್ಯಂತಾಗ್ರಹವನ್ನು ತಾಳಿದನು ಹಸಿವಿನಿಂದ ಬಸವಳಿದವನಿಗೆ ಎಲೆಯಲ್ಲಿ ಅನ್ನವನ್ನಿಕ್ಕಿ ತಿನ್ನುವ ಸಮಯದಲ್ಲಿ ಮಣ್ಣೆರಚಿದವನಮೇಲೆ ಆಗ್ರಹವುಂಟಾಗದಿರುವುದೇ ? ಆ ಕೋಪಭರದಲ್ಲಿ ಯುಕ್ತಾಯುಕ್ತ ವಿಮರ್ಶೆಯನ್ನು ಮಾಡಲಾರದೆ ಹೋದನು. ಅತಿವೇಗವಾಗಿ ಆ ಗಿಳಿಯನ್ನು ಹಿಡಿದು ಹಲ್ಲುಗಳನ್ನು ಪಟಪಟ ಕಡಿಯುತ್ತ ಕತ್ತನ್ನು ಹಿಸುಕಿ ಕಳಗೆ ಬಿಸುಟನು ಅಲ್ಲಿಗಾಕೋಪವು ಕೊಂಚಮಾತ್ರ ಉಪಶಮನವಾಯಿತು ಇಷ್ಟರಲ್ಲಿಯೇ ಮಂತ್ರಿಪುತ್ರನು ವಸದಲ್ಲೆಲ್ಲ ತಿರುಗಿ ಎಲ್ಲಿಯೋ ನೀರನ್ನುಕೊಂಡು ಸತ್ವರವಾಗಿ ಸ್ಥಳವನ್ನುಸೇರಿದನು ರಾಜಪುತ್ರನು ಜಲಪಾನಮಾಡಿ ದಾಹವನ್ನು ತೀರಿಸಿಕೊಂಡು ತೃಪ್ತನಾದನು. ತರುವಾಯ ಗಿಳಿಯು ಕಾಣದಿರುವುದನ್ನು ನೋಡಿ ಮಂತ್ರಿಪುತ್ರನು-ಮಿತ್ರನೇ ಗಿಳಿಯು ಎಲ್ಲಿಹೋಯಿತು ಎಂದು ಕೇಳಿದನು ರಾಜಪುತ್ರನು ತಾನುಮಾಡಿದ ಅಕಾರ್ಯವನ್ನು ಜ್ಞಾಪಿಸಿಕೊಂಡು ದುಃಖಿಸಿ, ಎಷ್ಟೋ ಪರಿತಾಪ ಪಟ್ಟು-ಹಾ ! ಎಂದು ನಿಟ್ಟುಸಿರಿಟ್ಟು, ನಡೆದ ವೃತ್ತಾಂತವೆಲ್ಲವನ್ನೂ ತಿಳಿಸಿ " ಮಹಾ ಪಾಪಾತ್ಮವಾದ ನಾನು ಗಿಳಿಯನ್ನು ಕೊಂದೆನಲ್ಲಾ" ಎಂದನು ಮಂತ್ರಿಪುತ್ರನು ಈ ದುರ್ವಾರ್ತೆಯನ್ನು ಕೇಳಿ ಮಹಾ ಬುದ್ಧಿಶಾಲಿಯಾದ ಗಿಳಿಯ ಮರಣಕ್ಕಾಗಿ ಚಿಂತಿಸಿ—" ರಾಜಪುತ್ರಾ ನೀನು ನಿಷ್ಕಾರಣವಾಗಿ ಗಿಳಿಯನ್ನು ಸಂಹರಿಸಿದೆ. ಅದು ಆಲೋಚಿಸದೆ ಯಾವ ಕೆಲಸವನ್ನೂ ಮಾಡಲಾರದು, ಆ ದೊನ್ನೆಯನೀರಿನಲ್ಲಿ ಯಾವದೋ ದೋಷವಿರುವುದನ್ನು ತಿಳಿದುಅದನ್ನುನೆಲದ ಮೇಲೆ ಬೀಳಕೆಡವಿರಬೇಕು" ಎಂದು ಹೇಳಿ ಪರೀಕ್ಷಿಸಿ ನೋಡುವೇಣವೆಂದು ರಾಜಪುತ್ರನೂ, ಮಂತಿಪುತ್ರನೂ ಸೇರಿ ಆಲದವೃಕ್ಷವನ್ನು ಹತ್ತಿ ಆ ನೀರುಬಿದ್ದ ಸ್ಥಳವನ್ನು ಸೇರಿದರು. ಅಲ್ಲಿ ಎರಡು ದೊಡ್ಡ ಕೊಂಬೆಗಳು ಒಂದಕ್ಕೊಂದು ಗಾಳಿಗೆ ಉಜ್ಜಲ್ಪಡುತ್ತಿದ್ದವು. ಆ ಸಂಧಿಯಲ್ಲಿ ದೊಡ್ಡ ಕೃಷ್ಣಸರ್ಪವು ಸಿಕ್ಕಿಬಿದ್ದು ಕೊಂಬೆಗಳು ಬಲವಾಗಿ ಉಜ್ಜುವುದರಿಂದ ಅದರ ಶರೀರವು ನುಜ್ಜುನುಜ್ಜಾಗಿ ಮಾಂಸಖಂಡಗಳು ನೀರುದುಂಬಿಗಳಾಗಿ ಕೆಳಗೆ ಬೀಳುತ್ತಿದ್ದವು ! ಶೂರಸೇನ, ಸುಬುದ್ಧಿಗಳು ಅದನ್ನು ನೋಡಿ ಅತ್ಯಂತಾಶ್ಚರ್ಯಮಗ್ನರಾದರು. ಗಿಳಿಯು ಈ ರಹಸ್ಯವನ್ನು ತಿಳಿದೇ ಇದನ್ನು ಕುಡಿದು ರಾಜಪುತ್ರನು ಮೃತನಾಗುವನೆಂದು ದೊನ್ನೆಯನ್ನು ಬೋರಲು ಹಾಕಿತು. ರಾಜಪುತ್ರನಿಗೆ ಆ ಸಮಯದಲ್ಲಿ ಉಂಟಾದ ದುಃಖವನ್ನಿಷ್ಟೆಂದು ಹೇಳಲಾಗದು. ಇಂತಹ ಬುದ್ಧಿ

ಶಾಲಿಯಾದ ಗಿಳಿಯನ್ನು ಕೊಂದ ಜ್ಞಾನಹೀನನ ಬಾಳೇತಕ್ಕೆ ? ಎಂದು ಪ್ರಾಣತ್ಯಾಗಮಾಡಲುಜ್ಜುಗಿಸಿದನು. ಆಗಲಾ ಸುಬುದ್ಧಿಯು ಹಲವು ಪರಿಯಾಗಿ ಬೋಧಿಸಿದುದರಿಂದ ಸಮಾಧಾನವನ್ನು ಪಡೆದನು.

ಆದುದರಿಂದ ಅಹೋ ಮುಂಜಭೂಪಾ, ಈ ವೃತ್ತಾಂತವನ್ನು ಆಲೋಚಿಸು. ಇಷ್ಟೇ ಅಲ್ಲದೆ ಧೈರ್ಯವಾಗಿ ಭೋಜನನ್ನು ಕೊಂದರೂ ಸಿಂಧುಲ ಮಹಾರಾಜನ ಮಿತ್ರರೂ ಮಹಾಬಲಶಾಲಿಗಳೂ ಆದ ರಾಜಪುತ್ರರು ನಿನ್ನ ರಾಜ್ಯವನ್ನೇ ನಿಮಿಷಾರ್ಧದಲ್ಲಿ ಧ್ವಂಸಮಾಡದೆ ಬಿಡರು, ಪುಣ್ಯ ಕರ್ಮಗಳನ್ನು ಮಾಡುವ ಪುರುಷನು ದುರ್ಮಾರ್ಗಗಳನ್ನಾಚರಿಸಲು ತನ್ನಷ್ಟಕ್ಕೆ ತಾನೇ ಸಂಪತ್ತು ನಾಶವಾಗುವುದು ಹಣತೆಯಲ್ಲಿ ಎಣ್ಣೆಯು ತುಂಬಿದ್ದು ಬತ್ತಿಯು ಸರಿಯಾಗಿದ್ದರೂ, ಸುಳಿಗಾಳಿ ಬೀಸಿದರೆ ಆ ದೀಪವು ಆರಿಹೋಗದಿರುವುದೇ ? ಇವೆಲ್ಲ ಸರ್ವಜ್ಞನಾದ ನಿನಗೆ ತಿಳಿಯದ ವಿಷಯಗಳಲ್ಲ ಎಂತಹ ಇಕ್ಕಟ್ಟುಗಳು ಬಂದರೂ ಪುತ್ರವಧೆಗಳೆನಿಸುವುದು ನಿನ್ನಂತಹ ಕೀರ್ತಿಕಾಮಿಗಳಿಗ ಸರಿಯಲ್ಲ-ಎಂದು ಪರಿಪರಿ ವಿಧವಾಗಿ ವತ್ಸರಾಜನು ಉಪದೇಶಮಾಡಿದನು ಸಕಾರಣವಾಗಿ ಲಾಭನಷ್ಟಗಳನ್ನು ತಿಳಿಸಿ ಭೋಜನನ್ನು ವಧಿಸಬಾರದೆಂದು ಪ್ರಾರ್ಥಿಸಿದನು ಆದರೆ ಆತನ ಉಪದೇಶವೆಲ್ಲ ಕಿವುಡನ ಮುಂದೆ ಕಿನ್ನರಿಯನ್ನು ಬಾಜಿಸಿದಂತಾಯಿತು ಭೋಜನನ್ನು ಹೇಗಾದರೂ ಮಾಡಿ ಕೊಲ್ಲಬೇಕೆಂದು ನಿಶ್ಚಯಿಸಿದವನಲ್ಲ ಈ ಉಪದೇಶಗಳೆಲ್ಲವೂ ವ್ಯರ್ಥವಾದವು ಮುಂಜನು ಕಣ್ಣುಗಳನ್ನು ಕೆಂಪಗೆಮಾಡಿ " ವತ್ಸರಾಜಾ! ಸಾಕು ಸಾಕು, ಈ ಉಪದೇಶಗಳೆಲ್ಲವನ್ನೂ ಅಲ್ಲಿ ಕಟ್ಟಿಡು, ನೀನು ನನಗೆ ಸೇವಕನೆಂದು ನನ್ನ ಕಾರ್ಯವನ್ನು ತಿಳಿಸಿ ಪರಿಪೂರ್ತಿ ಮಾಡಬೇಕೆಂದು ಬರಮಾಡಿದೆನೇ ಹೊರತು ಗುರುವಾಗಿ ಉಪದೇಶಮಾಡಬೇಕೆಂದು ಬರಮಾಡಲಿಲ್ಲ ಇಂತಹ ನೀತಿಶಾಸ್ತ್ರಗಳು ನಾನು ತಿಳಿಯದವುಗಳಲ್ಲ ಇಷ್ಟು ದಿನಗಳಿಂದಲೂ ನೀನು ಸೇವಕನೆಂದೂ ನಾನು ಪ್ರಭುವೆಂದೂ ತಿಳಿದುದಕ್ಕೀಗ ವಿಪರೀತವಾಯಿತು. ನೀತಿಬೋಧೆಗಾರಂಭಿಸಿ ತಲೆಹರಟುವ ಸೇವಕನೆಲ್ಲಿರುವನು ? ಸ್ವಾಮಿ ಕಾರ್ಯವು ಯುಕ್ತವಾಗಲಿ, ಅಯುಕ್ತವಾಗಲಿ ವಿಚಾರಮಾಡದೆ ಅದನ್ನು ನೆರವೇರಿಸಬೇಕಾದುದು ಸೇವಕನ ಕರ್ತವ್ಯವು. ಸ್ವಾಮಿಕಾರ್ಯವನ್ನು ನೆರವೇರಿಸದ ಭೃತ್ಯನ

ಜೀವಿತವು ಮೇಕೆಯ ಕತ್ತಿನಲ್ಲಿರುವ ಮೊಲೆಗಳಿಗೆ ಸಮಾನವು" ಎಂದು ಗರ್ಜಿಸಿ ನುಡಿದನು ವತ್ಸರಾಜನು ಇದು ಸಮಯವಲ್ಲವೆಂದು ಸುಮ್ಮನಿದ್ದು ತನ್ನಲ್ಲಿ ತಾನು ಹೀಗೆ ಆಲೋಚಿಸಿದನು:—"ಮುಂಜನು ಕೃತಘ್ನನು, ಸಿಂಧುಲನಾದರೋ ಇವನನ್ನು ಭೋಜನ ಸಮಾನವೆಂದೆಣಿಸಿ ರಾಜ್ಯವನ್ನು ಸ್ವಾಧೀನಮಾಡಿದನು. ಆ ಮೇಲನ್ನಾದರೂ ಸ್ಮರಿಸದೆ ನಿಷ್ಕಾರಣನಾಗಿ ಹಸುಳೆಯಾದ ಭೋಜನನ್ನು ಸಂಹರಿಸಲು ಯತ್ನಿಸಿದನು. ಇಂತಹ ಘಾತುಕನು ಲೋಕದಲ್ಲಿ ಮತ್ತೆಲ್ಲಿರುವನು? ಈತನಿಗೆ ಈರೀತಿ ವಿಪರೀತ ಬುದ್ಧಿ ಜನಿಸಿರುವುದು ವಿನಾಶಹೇತುವೇ ಹೊರತು ಬೇರಿಲ್ಲ 'ವಿನಾಶಕಾಲೇ ವಿಪರೀತಬುದ್ಧಿಃ' ಎಂದಲ್ಲವೇ ಆರ್ಯರು ಹೇಳಿರುವರು ಮತ್ತು ಅವನಿಗೆ ತಿಳಿಯುದಿಲ್ಲ, ಮತ್ತೊಬ್ಬರ ಮಾತು ಕೇಳುವುದಿಲ್ಲ, ಇಷ್ಟಕ್ಕಿಂತಲೂ ಮೌಢ್ಯವೇನಿರುವುದು? ಈತನಿಗೆ ನೀತಿಯನ್ನು ಹೇಳುವುದು ಅರಣ್ಯರೋದನವಾಗಿರುವುದು.

ಕಂ|| ಮರಳಿನೊಳೆಣ್ಣೆಯ ಬರಿಪುದು।
ಮಿರದೆ ಬಿಸಿಲ್ಗುದುರೆಯಿಂದೆ ನೀರೀಂಟುವುದುಂ ||
ನೆರೆ ಮೊಲದ ಕೋಂಬ ಗಳಿಪುದು।
ಮರಿದಲ್ಲವು ಮೂರ್ಖಜನವ ತಿರ್ದುವುದರಿದ್ದೆ ||೧||

ಎಂಬ ಭರ್ತೃಹರಿಯ ವಚನವು ಸುಳ್ಳಲ್ಲ" ಎಂದು ಚಿಂತಿಸಿ 'ಮಹಾಪ್ರಭೂ. ಶಾಂತನಾಗು! ಶಾಂತನಾಗು!! ಸ್ವಾಮಿಯವರ ಸನ್ನಿಧಿಯಲ್ಲಿ ನಾನೇನೋ ತಿಳಿದೂ ತಿಳಿಯದೆ ಮಾತನಾಡಿದೆನು. ವಾತ್ಸಲ್ಯದಿಂದ ಅವನ್ನೆಲ್ಲಾ ಮನ್ನಿಸಿ ಅನುಗ್ರಹಿಸಬೇಕಾಗಿ ಬೇಡುವೆನು. ನಾನೇನೂ ಸ್ವಾಮಿದ್ರೋಹಮಾಡುವವನಲ್ಲ. ನಿನ್ನಾಜ್ಞೆಯನ್ನು ಶಿರಸಾವಹಿಸಿ ಎಂತಹ ಕೆಲಸವನ್ನಾದರೂ ಮಾಡಲು ಸಿದ್ಧನಾಗಿರುವೆನು' ಎಂದು ವಿಜ್ಞಾಪಿಸಿದನು. ಮುಂಜನು ಕೋಪವನ್ನೆಲ್ಲ ದೂರಮಾಡಿ, ವತ್ಸರಾಜನನ್ನು ಹೊಗಳಿ, ಕರ್ತವ್ಯವನ್ನು ಅರುಹಿ, ಕಳುಹಿಸಿ ಕೊಟ್ಟನು.

ತರುವಾಯ ವತ್ಸರಾಜನು ರಥವನ್ನು ಸಿದ್ಧಮಾಡಿಕೊಂಡು ಸತ್ವರದಿಂದ ಭೋಜನು ವಿದ್ಯಾಭ್ಯಾಸ ಮಾಡುವ ಪಾಠಶಾಲೆಗೆ ಬಂದು ಗುರುಗಳ

ದ್ದರೂ ಸಂಶಯಪಡದೆ ಉಚ್ಚಸ್ವರದಿಂದ "ಎಲವೊ ಭೋಜಾ, ಹೀಗೆ ಬಾರೋ" ಎಂದು ನುಡಿದನು. ಅಲ್ಲಿರುವವರೆಲ್ಲ ಆಶ್ಚರ್ಯವನ್ನು ಹೊಂದಿ "ಮಹಾರಾಜ ಪುತ್ರನನ್ನು ವತ್ಸರಾಜನೆಂದೂ ನೀಚವಾಗಿ ಕರೆದವನಲ್ಲ, ಈಗ ಈರೀತಿ ಕರೆಯಲು ಕಾರಣವೇನೋ" ಎಂದು ವಿಚಾರಪರರಾಗಿ ಮ್ಲಾನವದನರಾಗಿದ್ದರು. ಭೋಜನು ಅಭಿಜಾತ್ಯನುರೂಪವಾದ ಕ್ಷಾತ್ರತೇಜಸುಳ್ಳವನಾದುದರಿಂದ ಈ ಕಠೋರ ವಾಕ್ಯವನ್ನು ಸಹಿಸಲಾರದೆ-'ಎಲವೋ ವತ್ಸಾ, ನೀನು ನನ್ನ ಚಿಕ್ಕ ತಂದೆಯಾದ ಮುಂಜನ ಭೃತ್ಯನು ಗೌರವಾಗೌರವಗಳನ್ನರಿಯದೆ ದುರಹಂಭಾವದಿಂದ ಮನಬಂದಂತೆ ಮಾತನಾಡುವೆಯಾ? ಎಚ್ಚರವಾಗಿರು' ಎಂದು ಗದರಿಸಿದನು. ವತ್ಸರಾಜನಿದನ್ನು ಕೇಳಿ, ಆರ್ಯಾ, ನನ್ನಿಂದ ತಪ್ಪಿಲ್ಲವು. ನಿನ್ನ ಚಿಕ್ಕತಂದೆಯಾದ ಮುಂಜನು ಈಗ ಬಲಾತ್ಕಾರವಾಗಿಯಾದರೂ ನಿನ್ನನ್ನು ಕರೆದುಕೊಂಡು ಬರಬೇಕಾಗಿ ಆಜ್ಞಾಪಿಸಿರುವನು. ಇದರ ಮೇಲೆ ದೇವರ ಚಿತ್ತ' ಎಂದನು.

ಆಗಲಾ ಭೋಜನು ಮುಂಜನ ಆಜ್ಞೆಯನ್ನು ಮೀರಲಾರದೆ ರಥದ ಮೇಲೆ ಕುಳಿತುಕೊಂಡನು. ವತ್ಸನು ರಥವನ್ನೆಲ್ಲಿಗೋ ಬಿಟ್ಟುಕೊಂಡು ಹೋದನು. ಈ ವರ್ತಮಾನವೆಲ್ಲರಿಗೂ ತಿಳಿಯಿತು. 'ಮುಂಜನ ದುರ್ಬೋಧೆಯಿಂದ ವತ್ಸನು ಭೋಜನನ್ನು ಕೊಲ್ಲುವುದಕ್ಕಾಗಿ ಎಲ್ಲಿಗೋ ತೆಗೆದುಕೊಂಡು ಹೋದನು.' ಎಂದು ಎಲ್ಲರೂ ಗುಜುಗುಟ್ಟುತ್ತಿದ್ದರು. ಕ್ರಮವಾಗಿ ಅಂತಃಪುರಕ್ಕೂ ತಿಳಿಯಿತು. ಭೋಜನ ತಾಯಿ ಸಾವಿತ್ರಿಯು ಹಾ! ಎಂದು ಮೂರ್ಛಿತಳಾಗಿ ಸ್ವಲ್ಪಚೇತರಿಸಿಕೊಂಡು ಹಾ! ಹಾ! ತಂದೆ ಭೋಜಾ, ಎಂದು ರೋದನ ಮಾಡುತ್ತ ಎದೆಯನ್ನು ಬಡಿದುಕೊಳ್ಳುತ್ತ-'ಅಯ್ಯೋ! ಕುಮಾರಾ, ಎಷ್ಟೋ ಕಷ್ಟನಷ್ಟಗಳನ್ನು ಸಹಿಸಿ ಸಾಕಿ ಸಲಹಿದ ನಿನಗೆಂತಹ ಕಷ್ಟಪ್ರಾಪ್ತವಾಯಿತು. ತಂದೇ, ಇನ್ನು ನಿನ್ನನ್ನು ಬಿಟ್ಟು ನಾನೆಂತು ಜೀವಿಸಲಿ? ಆಹಾ! ಆಹಾ! ಮೂಢಾ, ದುಷ್ಟಾ, ಎಂತಹ ಘಾತುಕ ಕಾರ್ಯಕ್ಕೆ ಮನವಿಟ್ಟೆ? ಯಾವ ಪಾಪವನ್ನೂ ಅರಿಯದ ಹಸು ಕೂಸನ್ನು ಕೊಲ್ಲಿಸಲು ನಿನಗೆಂತು ಮನ ಬಂತು? ಭೋಜನಿಗೆ ಪೂರ್ವಜನ್ಮದಲ್ಲಿ ಶತ್ರುವಾಗಿ ಹುಟ್ಟಿ ಈ ಜನ್ಮದಲ್ಲಿ ಆ ಹಗೆಯನ್ನು ತೀರಿಸಿಕೊಳ್ಳಲು ಹುಟ್ಟಿರುವೆಯಾಗಬಹುದು. ಹಾ! ನಿನ್ನ

ರಾಜ್ಯವನ್ನು ಅಪಹರಿಸುವನೆಂದು ಇಂತಹ ದುರ್ಮಾರ್ಗ ಕಾರ್ಯಕ್ಕೆ ಮನಸಿಟ್ಟೆಯಾ ? ಛಿ ! ಛಿ !! ನಿನ್ನ ಜನ್ಮವನ್ನು ಸುಡು' ಎಂದು ಮೊದಲಾಗಿ ಅನೇಕ ರೀತಿ ದುಃಖಿಸುತ್ತಿದ್ದಳು. ರಾಜಭವನದಲ್ಲಿ ಆಬಾಲವೃದ್ಧರಾದ ಸ್ತ್ರೀಪುರುಷರೆಲ್ಲರೂ ಶೋಕಸಾಗರದಲ್ಲಿ ಬಿದ್ದು ಮುಳುಗಿ ಪರಿತಪಿಸುತ್ತಿದ್ದರು. ಧಾರಾನಗರವೆಲ್ಲ ರಾಮರಾಜ್ಯ ವಿಯೋಗಸಮಯದಲ್ಲ ಕಳಾಹೀನವಾದ ಅಯೋಧ್ಯೆಯಂತಿದ್ದಿತು. ಕೆಲವರು ಭೋಜನ ಮರಣವಾರ್ತೆಯನ್ನು ಕೇಳಿ ಸಹಿಸಲಾರದೆ ಪ್ರಾಣತ್ಯಾಗವನ್ನುಕೂಡ ಮಾಡಿದರು ಮುಂಜನು ಮಾತ್ರ ಚಿಂತೆ ಕಳೆಯಿತೆಂದು ಏಕಾಂತ ಗೃಹದಲ್ಲ ಕುಳಿತಿದ್ದನು ಪುರನಿವಾಸಿಗಳೆಲ್ಲರೂ ಮುಂಜನನ್ನು ಬಹುಪರಿವಯಾಗಿ ದೂಷಿಸುತ್ತಿದ್ದರು.

ಇತ್ತಲಾ ವತ್ಸರಾಜನು ಮನುಷ್ಯ ಸಂಚಾರವಿಲ್ಲದ ಒಂದು ಅರಣ್ಯಕ್ಕೆ ಭೋಜನನ್ನು ಕರೆದುಕೊಂಡು ಹೋದನು ಅಲ್ಲಿ ಸಿಂಹ, ಹುಲಿ, ಆನೆ ಮೊದಲಾದ ಕ್ರೂರಮೃಗಗಳ ಭೀಕರ ಧ್ವನಿಯು ಬಹು ಭಯವನ್ನುಂಟುಮಾಡುತ್ತಿದ್ದಿತು. ಈ ಕೂಗಿಗೆ ಮೊದಲುಮೊದಲು ಭೋಜನು ಭಯವನ್ನು ಹೊಂದಿದನು. ಆದರೆ ಸ್ವಲ್ಪಕಾಲ ಕಳೆದ ಮೇಲೆ ಧೈರ್ಯವನ್ನು ತಾಳಿ ನಿರ್ಭಯವಾಗಿಯೇ ಇದ್ದನು. ಹೀಗೆ ಮುಂವಕ್ಕೆ ಹೋಗುತ್ತ ಹೋಗುತ್ತ ಒಂದು ದೊಡ್ಡ ವೃಕ್ಷದ ಸಮೀಪದಲ್ಲಿ ರಥವನ್ನು ನಿಲ್ಲಿಸಿ, ವತ್ಸನು ರಥದಿಂದಿಳಿದನು. ತದನಂತರ ಭೋಜನು ಕೆಳಕ್ಕಿಳಿದು ಒಂದು ಪಕ್ಕದಲ್ಲಿ ನಿಂತುಕೊಂಡನು. ವತ್ಸರಾಜನು ಸ್ವಲ್ಪವಾದರೂ ಶಂಕಿಸದೆ ಒರೆಯಿಂದ ಥಳಥಳ ಹೊಳೆಯುವ ಕತ್ತಿಯನ್ನು ಸೆಳೆದು ಝಳಿಪಿಸುತ್ತ ಭೋಜನನ್ನು ಕುರಿತು ಹೀಗೆ ಹೇಳಿದನು — 'ಅಹೋ ರಾಜಪುತ್ರಾ, ನಿನ್ನನ್ನು ಇಲ್ಲಿಗೆ ಕರೆದುತಂದ ಸಮಾಚಾರವನ್ನು ಊಹಿಸಿದೆಯಾ ? ನಿನ್ನ ಚಿಕ್ಕತಂದೆಯಾದ ಮುಂಜನು ತನ್ನ ರಾಜ್ಯವನ್ನು ನೀನು ಅಪಹರಿಸುವೆಯೆಂದು ದುರೂಹೆಮಾಡಿ, ಈ ನಿರ್ಜನಾರಣ್ಯದಲ್ಲಿ ನಿನ್ನನ್ನು ಕೊಂದು ನಿನ್ನ ಶಿರಸ್ಸನ್ನು ತೋರಿಸಬೇಕೆಂದಾಜ್ಞೆಮಾಡಿರುವನು. ಆದುದರಿಂದ ಆತನ ಆಜ್ಞೆಗೆ ಸಿದ್ಧನಾಗು ಏನನ್ನಾದರೂ ಹೇಳುವುದಿದ್ದರೆ ಆಲಸ್ಯಮಾಡದೆ ಬೇಗಹೇಳು." ಎಂದು ವತ್ಸರಾಜನ ಕ್ರೂರವಾಕ್ಯಗಳಿಗೆ ಭೋಜನ ಮನಸ್ಸು ಚಲಿಸಲಿಲ್ಲ. ಸ್ವಲ್ಪವಾದರೂ ಭೀತನಾಗದೆ ವತ್ಸರಾಜನನ್ನು

ಕುರಿತು—'ಅಯ್ಯಾ ಮಂತ್ರೀ, ನೀನು ಭೃತ್ಯನು, ಮುಂಜನು ಪ್ರಭುವು ಪ್ರಭುವಾಜ್ಞಾಪಿಸಿದ ಕಾರ್ಯವನ್ನು ನೆರವೇರಿಸುವುದು ಭೃತ್ಯನ ಕರ್ತವ್ಯವು. ನನಗೆ ಮೃತ್ಯುವು ಸನ್ನಿಹಿತವಾಗದಿರುವ ಕಾಲದಲ್ಲಿ ಯಾವನೂ ಕೊಲ್ಲಲುಶಕ್ತನಲ್ಲ ಮನುಷ್ಯನ ಬಾಳ್ವೆಯೆಲ್ಲವೂ ಕರ್ಮಾಧೀನವಾಗಿರುವುದು. ಇಲ್ಲಿಗೆ ನಾವೀರ್ವರೂ ಈ ದಿನ ಸೇರಬೇಕಾದದು ನಿನ್ನಿಂದ, ಮುಂಜನಿಂದ, ನನ್ನಿಂದ ಆಗಲಾರದು; ದೈವವೇ ನಮ್ಮನ್ನಿಲ್ಲಿ ಸೇರಿಸಿತು. ಲಂಕಾಧೀಶನಾದ ರಾವಣ ನೆಂಥವನು? ತನ್ನ ಇಪ್ಪತ್ತು ಭುಜಗಳಿಂದ ಕೈಲಾಸ ಪರ್ವತವನ್ನು ತೂಗಾಡಿಸಿದನು; ದಿಕ್ಪಾಲಕರ ಮಾನಧನಗಳನ್ನು ಅಪಹರಿಸಿದನು; ಗಂಧರ್ವರ ಬಂಧುರವಾದ ಯಶಸ್ಸನ್ನು ಕುಂದಿಸಿದನು, ಮನುಜವರೇಣ್ಯರ ಮರ್ಮವನ್ನು ಭೇದಿಸಿದನು; ಸಮಸ್ತ ವಸ್ತುಗಳನ್ನೂ ದಿಗ್ವಿಜಯಮಾಡಿ ಸಂಪಾದಿಸಿದನು ಇಂತಹ ವೀರನು ಅರಣ್ಯದಲ್ಲಿ ಆರಿಗೂ ಬಾಧೆಯನ್ನುಂಟುಮಾಡದೆ ಋಷಿವೇಷದಿಂದ ಸಂಚರಿಸುತ್ತಿದ್ದ ಶ್ರೀರಾಮನ ಧರ್ಮಪತ್ನಿಯನ್ನಪಹರಿಸಿದ ಕಾರಣ ಭಗವಂತನಾದ ಶ್ರೀರಾಮನಿಂದ ಮೃತನಾದನು. ಆದುದರಿಂದ ಯಾರಿಗಾದರೂ ಕಾರಣವಿಲ್ಲದೆ ಮೃತ್ಯುವುಂಟಾಗಲಾರದು. ಇದಕ್ಕಾಗಿ ಸಂತೋಷಿಸುವುದಾಗಲಿ, ದುಃಖಿಸುವುದಾಗಲಿ ಕೆಲಸವಿಲ್ಲದ ಕೆಲಸ. ಆದುದರಿಂದ ಮುಂಜನ ಆಜ್ಞಾನುಸಾರ ಅವಶ್ಯವಾಗಿ ನನ್ನ ಶಿರವನ್ನು ಕತ್ತರಿಸಿ ಆತನಿಗೆ ತೋರಿಸು. ಈಗ ನಾನೊಂದು ಉತ್ತರವನ್ನು ಬರೆದು ಕೊಡುತ್ತೇನೆ. ನನ್ನ ಸಹಸ್ರ ನಮಸ್ಕಾರಗಳೊಡನೆ ಈ ಉತ್ತರವನ್ನು ಮುಂಜನಿಗೆ ಕೊಡು' ಎಂದು ಗಂಭೀರ ಸ್ವರದಿಂದ ಹೇಳಿದನು.

ಮಂತ್ರಿಯು ಆತನ ಮಾತುಗಳಿಗೆ ಸಮ್ಮತಿಸಿದನು. ಭೋಜನು ಉತ್ತರವನ್ನು ಬರೆಯಲುಜ್ಜುಗಿಸಿದನಾದರೂ ಅಲ್ಲಿ ಲೇಖನಸಾಮಗ್ರಿಗಳೆಲ್ಲಿ ದೊರೆಯುವುವು? ಸ್ವಲ್ಪಕಾಲ ಹಾಗೆಯೇ ಆಲೋಚಿಸಿ ಕತ್ತಿಯನ್ನು ತೆಗೆದುಕೊಂಡು ತನ್ನ ಮಧ್ಯಾಂಗುಳಿಯನ್ನು (ನಡುಬೆರಳು) ನಿರರ್ಥಕವೆಂದುಬಗೆದು ಕರಕರನೆ ಹರಿದು ಆ ರಕ್ತದಿಂದ ಒಂದಾಲದೆಲೆಯಮೇಲೆ ಒಂದು ವೃತ್ತವನ್ನು ಬರೆದು ಆ ಎಲೆಯನ್ನು ವತ್ಸನ ಕೈಗೆ ಕೊಟ್ಟನು. ಅದನ್ನು ವತ್ಸರಾಜನು ಓದಿದಮಾತ್ರದಿಂದಲೇ ಕೈಯ್ಯಲ್ಲಿದ್ದ ಕತ್ತಿಯು ಕೆಳಗೆ ಜಾರಿ ಬಿದ್ದುಹೋಯಿತು. ಅರ್ಥ

ವನ್ನು ಸಮಗ್ರವಾಗಿ ಗ್ರಹಿಸುವುದರೊಳಗಾಗಿ ಮತ್ತೆ ಕತ್ತಿಯನ್ನು ತೆಗೆದುಕೊಳ್ಳಲು ಮನಸ್ಸು ಹಿಂದೆಗೆಯಿತು. ಕಣ್ಣುಗಳಲ್ಲಿ ಬಾಷ್ಪಗಳು ಉದುರಲಾರಂಭಿಸಿದುವು; ಹಾಗೆಯೇ ಆಲೋಚಿಸಿ ಖಡ್ಗವನ್ನು ದೂರಕ್ಕೊಗೆದನು ಭೋಜನ ಸನ್ನಿಧಿಯಲ್ಲಿ ನಿಂತು ಬದ್ಧಾಂಜಲಿಯಾಗಿ ಹೀಗೆಬಿನ್ನವಿಸಿದನು :—'ಅಹೋ! ಭೋಜರಾಜಾ, ನಿನ್ನ ಪಾಂಡಿತ್ಯವನ್ನೂ, ಸ್ಥೈರ್ಯವನ್ನೂ, ಇಂದ್ರಿಯನಿಗ್ರಹವನ್ನೂ ತಿಳಿದುಕೊಂಡುದು ಮೊದಲು ನಿನ್ನನ್ನುಕೊಲ್ಲಲು ಮನಸೊಪ್ಪಲಿಲ್ಲವು ಮುಂಜನ ಉಪ್ಪನ್ನು ತಿನ್ನುವುದರಿಂದ ಆತನ ಆಜ್ಞೆಗೊಳಗಾಗಿ ಇಂತಹ ಅಕಾರ್ಯವನ್ನು ಮಾಡಲೊಪ್ಪಿಕೊಂಡೆನು ಛೀ ! ನನ್ನ ಜನ್ಮವೇತಕ್ಕೆ ? ನನ್ನನ್ನು ಕ್ಷಮಿಸು. ನಿನ್ನನ್ನು ಕೊಲ್ಲಲಾರೆನು. ನನ್ನ ಪ್ರಾರ್ಥನೆಯನ್ನಂಗೀಕರಿಸಿ ನನ್ನ ಮನೆಗೆ ಬಾ. ಇದು ರಾತ್ರಿಸಮಯವಾದುವರಿಂದ ಈ ಅಂಧಕಾರದಲ್ಲಿ ನಿನ್ನನ್ನಾರೂ ಕಾಣಲಾರರು. ತರುವಾಯ ನಿನ್ನನ್ನು ಏಕಾಂತಸ್ಥಲದಲ್ಲಿರಿಸುವೆನು. ಮುಂದೆ ಮಾಡಬೇಕಾದುದನ್ನು ಆಲೋಚಿಸುವೆನು.'

ಹೀಗೆ ನುಡಿದ ಮಾತಿಗೆ ಭೋಜನು ಮೊದಲುಸಮ್ಮತಿಸದೆ ತರುವಾಯ ಇದು ದೈವಾಜ್ಞೆಯೆಂದು ತಿಳಿದು ಒಪ್ಪಿಕೊಂಡನು. ವತ್ಸರಾಜನು ಸಂತೋಷಿಸಿ, ಭೋಜನನ್ನು ರಥದಮೇಲೆ ಕುಳ್ಳಿರಿಸಿಕೊಂಡು ರಹಸ್ಯವಾಗಿ ಯಾರಿಗೂ ತಿಳಿಯದಂತೆ ತನ್ನ ಗೃಹಕ್ಕೆ ಕರೆದುಕೊಂಡು ಬಂದು ಒಂದಾನೊಂದುಕಡೆ ಇರಿಸಿದನು. ಈ ಸಮಾಚಾರವು ಹೊರಬೀಳದಂತೆ ಯಾರು ತನ್ನನ್ನು ನೋಡುವುದಕ್ಕೆ ಬಂದರೂ ಅವರಿಗೆ ಹೊರಗಿನಿಂದಲೇ ಸಮಾಧಾನ ಹೇಳಿಕಳುಹಿಸುತ್ತಿದ್ದನು. ಯಾರೇ ಆಗಲಿ ಆಯುಶ್ಶೇಷವಿದ್ದರೆ ದೊಡ್ಡ ಹುಲಿಯ ಬಾಯಿಂದಲಾದರೂ ತಪ್ಪಿಸಿಕೊಳ್ಳುವರಲ್ಲವೇ ? ಭೋಜನ ಅಂಗುಳಿ ಚ್ಛೇದನದಿಂದಲೇ ಆತನ ಅರಿಷ್ಟವಿಶಿಷ್ಟವೂ ಪರಾಭವವಾಯಿತು. ವತ್ಸನು ಮಾತ್ರ ಸಂಪೂರ್ಣ ನಿರ್ಭೀತನಾಗಿರಲಿಲ್ಲ. " ದುರಾಗ್ರಹಪ್ರತಿನಿವಿಷ್ಟನಾದ ಮುಂಜನಿಗೆ ಭೋಜನ ಶಿರಸ್ಸನ್ನು ಹೇಗೆ ತೋರಿಸಲಿ ? " ಎಂದು ಮೊದಲಾಗಿ ಕೊನೆಗೆ ಒಂದುಆಲೋಚನೆಮಾಡಿದನು. ಧಾರಾನಗರದಲ್ಲಿ ಉತ್ತಮ ಕಲಾಸಂಪನ್ನನಾದ ಓರ್ವ ಶಿಲ್ಪಿ ಇದ್ದನು. ಅವನು ಯಾವ ವಸ್ತುವನ್ನಾಗಲಿ, ರೂಪವನ್ನಾಗಲಿ, ಅವಯವ ವಿನ್ಯಾಸಗಳನ್ನಾಗಲಿ ಯಥಾವತ್ತಾಗಿ ಅರಗಿನಿಂದ ಮಾಡುತ್ತಿದ್ದನು. ಈ ಸಮಾ-

ಚಾರವನ್ನು ವತ್ಸರಾಜನು ತಿಳಿದು, ರಹಸ್ಯವಾಗಿ ಆತನನ್ನು ಕರೆಸಿಕೊಂಡು ಭೋಜನ ಶಿರಸ್ಸಿನಂತೆ ಅರಗಿನಲ್ಲಿ ಒಂದು ಶಿರವನ್ನು ಮಾಡಿಸಿ, ಮರುದಿನ ರಾತ್ರಿ ಆ ಶಿರವನ್ನು ತೆಗೆದುಕೊಂಡು ಮುಂಜನ ಅಂತಃಪುರಕ್ಕೆ ಹೋಗಿ ಅದನ್ನು ತೋರಿಸಿದನು. ಮುಂಜನು ಅತಿ ಕ್ರೂರನಾದರೂ ಭೋಜನ ಶಿರವನ್ನು ನೋಡಿದ ಮಾತ್ರವೇ ಹಿಡಿಯಲಾರದಷ್ಟು ದುಃಖವುಂಟಾಗಿ ಬಿಕ್ಕಿಬಿಕ್ಕಿ ಅಳಲಾರಂಭಿಸಿದನು. ಈತನ ರೋದನಧ್ವನಿಯನ್ನು ಕೇಳಿ ಅಂತಃಪುರದ ಸ್ತ್ರೀಯರು ಭೋಜನು ಮೃತನಾದನೆಂದು ಅಮಿತವಾಗಿ ದುಃಖಿಸಿದರು ಅನಂತರ ಮುಂಜನು ವತ್ಸನನ್ನು ನೋಡಿ—"ಅಯ್ಯಾ, ಭೋಜಕುಮಾರನು ತನ್ನ ಶಿರವನ್ನು ಕತ್ತರಿಸುವಾಗ ಏನಾದರೂ ಹೇಳಿದಮದುಂಟೇ? ಎಂದು ಕೇಳಿದನು. ಆಗಲಾ ವತ್ಸರಾಜನು ಅರಣ್ಯದಲ್ಲಿ ಬರೆದು ಕೊಟ್ಟಿದ್ದ ಪತ್ರವನ್ನು ಕೊಟ್ಟು ಮುಂಜನಿಂದ ಅಪ್ಪಣೆಯನ್ನು ಪಡೆದುಕೊಂಡು ತನ್ನ ಗೃಹವನ್ನು ಸೇರಿದನು. ಮುಂಜನು ಪತ್ರವನ್ನು ಈ ರೀತಿಯಾಗಿ ಓದಿದನು:—

ಶ್ಲೋ॥ ಮಾಂಧಾತಾಚ ಮಹೀಪತಿಃ ಕೃತಯುಗಾಲಂಕಾರ ಭೂತೋಗತಃ।
ಸೇತುರ್ಯೇನ ಮಹೋದಧೌ ವಿರಚಿತಃಕ್ವಾಸೌ ದಶಾಸ್ಯಾಂತಕಃ॥
ಅನ್ಯೇಚಾಪಿ ಯುಧಿಷ್ಠಿರ ಪ್ರಭೃತಯೋ ಯಾತಾದಿವಂ ಭೂಪತೇ।
ನೈಕೇನಾಪಿ ಸಮಂಗತಾವ ಸುಮತೀ ನೂನಂ ತ್ವಯಾಯಾಸ್ಯತಿ॥ ೧॥

ಸೀ॥ ಕೃತಯುಗಾಲಂಕಾರನಾಗಿರ್ದ ಮಾಂ।
ಧಾತ ಪ್ರಖ್ಯಾತ ತಾಂ ಮಡಿದನಾತ॥
ಅತಿಶಯಮೆನಲು ಶ್ರೀರಾಮನುದಧಿಯ ಕಟ್ಟಿ।
ಪತಿತರ ಕೊಂದು ತಾಂ ಮಡಿದನಾತ॥
ಮತಿಯುತ ಧರ್ಮಜ ಪ್ರಭೃತಿ ತಾನಂತೆಯೆ।
ಗತಿಸಿದನೀ ಭರತಾವನಿಯೊಳು॥
ಕ್ಷಿತಿಯನೀ ಮೂವರೊಳೊರ್ವರುಂ ತಮ್ಮಯ।
ಜೊತೆಯೊಳು ಕೊಂಡು ಪೋದುದನುಮರಿಯೆ॥

ಗೀ॥ ಪಿತನೆ ನೀಂ ಮಡಿಯುವುದಸಂಭವಮದಲ್ತು।
ಗತಿಸಿದರುಮಿಳೆಯಂ ತೊರೆದೆಲ್ಲಿ ಪೋಪೆ॥
ಜೊತೆಯೊಳಿಲ್ಲವು ಬರ್ಪುವು ನಿನ್ನ ಬಳಿಗೆ।
ಸತತ ಸುಖದೊಳಗಿರು ತೊರೆಯದಿರು ತನುವ॥ ೧॥

“ ಕೃತಯುಗಕ್ಕೆ ಭೂಷಣಪ್ರಾಯನಾಗಿದ್ದು ಈ ಭೂಮಿಯೆಲ್ಲವನ್ನೂ ಆಳಿದ ಮಾಂಧಾತಚಕ್ರವರ್ತಿಯು ಮೃತನಾದನು, ಸಮುದ್ರದಮೇಲೆ ಸೇತುವೆಯನ್ನು ಕಟ್ಟಿ ರಾವಣನನ್ನು ವಧಿಸಿದ ಶ್ರೀರಾಮನು ಸ್ವರ್ಗಸ್ಥನಾದನು. ಮತ್ತು ಧರ್ಮಜಾದಿ ಪ್ರಭುಗಳು ಕೀರ್ತಿಶೇಷರಾದರು ಇವರಲ್ಲೊಬ್ಬರಾದರೂ ತಾವು ಹೋಗುವಾಗ ಭೂಮಿಯನ್ನು ಕೊಂಡುಹೋಗಲಿಲ್ಲ. ಆದರೆ ನೀನು ಮರಣವಾಗುವಾಗ ಭೂಮಿಯನ್ನು ಬಿಟ್ಟುಹೋಗುವುದಿಲ್ಲವೆಂದು ತೋರುವುದು.”

ಈ ವೃತ್ತವನ್ನು ಓದುತ್ತಿರುವಾಗಲೇ ಮೂರ್ಛಾಕ್ರಾಂತನಾಗಿ ನೆಲದ ಮೇಲೆ ಬಿದ್ದನು. ಹಾ ಭೋಜಾ ! ಹಾ ಭೋಜಾ !! ಎಂದು ರೋದಿಸುತ್ತ ಎದೆಯನ್ನು ಹೊಡೆದುಕೊಳ್ಳಲಾರಂಭಿಸಿದನು. ಪರಿಪರಿ ವಿಧವಾಗಿ ಭೋಜನ ಸುಗುಣಗಳನ್ನು ವರ್ಣಿಸುತ್ತ, ಪಶ್ಚಾತ್ತಾಪ ಪಡುತ್ತ, ವತ್ಸರಾಜನ ಮಾತುಗಳನ್ನು ಕೇಳದೆ ದುರಾತ್ಮನಾದೆನೆಂದು ನಿಂದಿಸಿಕೊಳ್ಳುತ್ತ ಇದ್ದನು ಮಂತ್ರಿ ಮೊದಲಾದ ಸಾಮಂತರು ಎಷ್ಟು ಸಮಾಧಾನಹೇಳಿದರೂ ಉಕ್ಕಿಉಕ್ಕಿ ಬರುವ ದುಃಖತರಂಗದಲ್ಲಿ ಬಿದ್ದು ಗೋಳಾಡುತ್ತಿದ್ದನು. ಈ ದುಃಖಭರದಲ್ಲಿ ಅನ್ನಾಹಾರಗಳನ್ನು ತೊರೆದು ಚಿಂತಾಸಮುದ್ರದಲ್ಲಿ ಬಿದ್ದು ಮುಳುಗಿ ಹೋದನು. ಮೂರು ದಿನಗಳು ಕಳೆದುವು. ಮುಂಜನು ಭೋಜರಾಜನ ವಿಯೋಗದಿಂದ ಪ್ರಾಣತ್ಯಾಗಮಾಡದಿರಲಾರನೆಂದು ಎಲ್ಲರೂ ನಿಶ್ಚಯಿಸಿದರು. ವತ್ಸರಾಜನೀ ಸಮಾಚಾರವನ್ನು ತಿಳಿದು ಭೋಜನನ್ನು ಕಾಣಿಸಲಿದೇ ಸಮಯವೆಂದೂಹಿಸಿ ದುಃಖಿಸುತ್ತಿದ್ದ ಮುಂಜನ ಬಳಿಗೆ ಬಂದು ಈರೀತಿ ಹೇಳಿದನು—“ ಮಹಾಪ್ರಭೂ, ಕಳದು ಹೋದುದಕ್ಕಾಗಿ ದುಃಖಿಸಿ ಪ್ರಯೋಜನವಿಲ್ಲ. ಇನ್ನು ಕರ್ತವ್ಯವನ್ನಾಲೋಚಿಸಬೇಕು ಈ ದಿನ ಪ್ರಾತಃಕಾಲದಲ್ಲಿ ಪಟ್ಟಣದ ರಾಜಮಾರ್ಗದಲ್ಲಿ ಒಬ್ಬ ಯೋಗಿಯನ್ನು ನೋಡಿದೆನು. ಆತನು ಬಹಳ ಪ್ರಭಾವಶಾಲಿಯಾಗಿ ಕಾಣಿಸಿದನು. ಮೃತಿಹೊಂದಿದವರನ್ನು ತನ್ನ ಪ್ರಭಾವದಿಂದ ಬದುಕಿಸುವನಂತೆ. ನಮ್ಮ ಭೋಜನ ವೃತ್ತಾಂತವನ್ನು ಸಹ ಆತನ ಸಂಗಡ ಹೇಳಿದೆನು. ಅದಕ್ಕಾತನು ಒಂದು ಹೋಮವನ್ನುಮಾಡಬೇಕೆಂದೂ, ಅದನ್ನು ಮಾಡಿದರೆ ಭೋಜನು ತಪ್ಪದೆ ಆ ಹೋಮಕುಂಡದಲ್ಲಿ ಉದ್ಭವಿಸಿ ಬರುವ

ನೆಂದೂ ಹೇಳಿದನು, ಆತನ ಮಾತುಗಳು ಸತ್ಯವಾಗಿಯೇ ಕಾಣುವುವು. ಹೀಗೆ ಎಷ್ಟೋ ಜನಗಳನ್ನು ಬದುಕಿಸಿರುವನೆಂದು ಕಿಂವದಂತಿಯು ಸಹ ಇರುವುದು. ಆದ್ದರಿಂದ ಆಜ್ಞೆಯಾದರೆ ಆತನನ್ನು ಕರೆಸುವೆನು.

ಈ ಅಮೃತೋಪಮಾನವಾದ ಮಂತ್ರಿಯ ವಾಕ್ಯಗಳು ಮುಂಜನ ಕಿವಿ ಸೋಂಕಲು ಆನಂದಭರದಿಂದ ವತ್ಸರಾಜನನ್ನು ಕೊಂಡಾಡಿ ಹೇಗಾದರೂ ಭೋಜಕುಮಾರನನ್ನು ಬದುಕಿಸುವ ಉಪಾಯ ಮಾಡಬೇಕೆಂದು ಕಳುಹಿಸಿದನು. ತರುವಾಯ ವತ್ಸನು ರಾಜಮಂದಿರ ದ್ವಾರಕ್ಕೆದುರಾಗಿ ಒಂದು ಚಪ್ಪರವನ್ನು ಹಾಕಿಸಿ ಅಲ್ಲಿ ಹೋಮಕುಂಡವನ್ನು ತೆಗೆಸಿದನು. ಸಮಿತ್ತುಗಳೇ ಮೊದಲಾದ ಹೋಮ ದ್ರವ್ಯಗಳನ್ನೆಲ್ಲ ಸಿದ್ಧಪಡಿಸಿ, ಈ ವೃತ್ತಾಂತವನ್ನು ಪ್ರಧಾನಮಂತ್ರಿಯಾದ ಬುದ್ಧಿಸಾಗರನಿಗೆ ತಿಳಿಸಿದನು. ಬುದ್ಧಿಸಾಗರನು ಯೋಗಿವೇಷವನ್ನು ಧರಿಸಿ ಬಂದು, ಹೋಮಕುಂಡದ ಸುತ್ತಲೂ ತೆರೆಯನ್ನು ಕಟ್ಟಿಸಿ, ಅಲ್ಲಿ ಏನೇನೋ ಮಂತ್ರಜಪಮಾಡುವವನಂತೆ ನಟಿಸಿದನು, ಅಗ್ನಿಯಲ್ಲಿ ಹೋಮದ್ರವ್ಯಗಳನ್ನೆರಚುತ್ತ ಮಂತ್ರಪುನಶ್ಚರಣೆಯನ್ನು ಹೆಚ್ಚಾಗಿ ಮಾಡಿದನು. ಅಷ್ಟಕ್ಕೆ ಮೊದಲೇ ವತ್ಸನು ಭೋಜಕುಮಾರನನ್ನು ಆ ತೆರೆಯೊಳಗೆ ಸೇರಿಸಿದ್ದನು. ಮುಂಜನು ಹೋಮ ಪ್ರದೇಶಕ್ಕೆ ಸ್ವಲ್ಪ ಸಮೀಪದಲ್ಲಿ ಕುಳ್ಳಿರಿಸಲ್ಪಟ್ಟಿದ್ದನು. ರಾತ್ರಿ ಎರಡು ಜಾವಗಳು ಕಳೆದವು, ಹೋಮವು ಸಕ್ರಮವಾಗಿ ಪೂರ್ತಿಯಾಯಿತು! ಆ ಸಮಯದಲ್ಲಿ ಯೋಗೀಶ್ವರನು ಜಯಜಯ ಶಬ್ದಗಳನ್ನು ನುಡಿಯುತ್ತ ತೆರೆಯನ್ನು ತೆಗೆದು ಎಲ್ಲರೂ ನೋಡುವಹಾಗೆ ಭೋಜನನ್ನು ಈಚೆಗೆ ಕರೆದುಕೊಂಡು ಬಂದನು. ಪೌರರೆಲ್ಲರೂ ಅತ್ಯಾಶ್ಚರ್ಯ ಹೊಂದಿದರು ಮುಂಜನೂ, ಸಾವಿತ್ರಿ ಮೊದಲಾದೆಲ್ಲರೂ ಅತ್ಯಾನಂದಪರವಶರಾದರು. ತದನಂತರ ಮುಂಜನು ಯೋಗೀಶ್ವರನನ್ನು ಅಂತಃಪುರಕ್ಕೆ ಕರೆದುಕೊಂಡು ಹೋಗಿ ಅನೇಕ ಪರಿಯಾಗಿ ಸ್ತುತಿಸಿ, ವಿಶೇಷ ದ್ರವ್ಯ-ಭೂಷಣ-ದುಕೂಲಗಳಿಂದ ಸತ್ಕರಿಸಿ, ನಮಸ್ಕರಿಸಿ ಕಳುಹಿಸಿಕೊಟ್ಟನು, ಹೀಗೆ ಕೆಲವು ದಿನಗಳು ಕಳೆಯಲು ಮುಂಜನು ರಾಜ್ಯಸುಖದಮೇಲೆ ಆಶೆಯುಳಿದು,ದಿವ್ಯಜ್ಞಾನಿಯಾಗಿ ರಾಜ್ಯವನ್ನು ಭೋಜನಿಗೊಪ್ಪಿಸಬೇಕೆಂದು ಒಗೆದನು. ತದನುಸಾರವಾಗಿ ಅವಂತಿ ದೇಶಾಧಿಪತಿಯ ಪುತ್ರಿಯೂ, ಗುಣವತಿಯೂ, ರೂಪವತಿಯೂ

ಆದ ಲೀಲಾವತಿ ಎಂಬ ಕನ್ಯೆಯನ್ನು ಭೋಜನಿಗೆ ತಂದು ಲಗ್ನಮಾಡಿ ಶುಭ ದಿನದಲ್ಲಿ ಎಲ್ಲ ಸಾಮಂತರಾಜರೊಡಗೂಡಿ ಮುಂಜನು ಭೋಜನಿಗೆ ಪಟ್ಟಾಭಿ ಷೇಕ ಮಹೋತ್ಸವವನ್ನು ನೆರವೇರಿಸಿ ವಿರಕ್ತನಾದನು. ಹೀಗೆ ಭೋಜನು ವಿದರ್ಭದೇಶಕ್ಕೆ ರಾಜನಾದುದರಿಂದ ಪ್ರಜೆಗಳೆಲ್ಲರೂ ಅತ್ಯಂತಾನುರಾಗಯುತ ರಾಗಿರಲು ರಾಮರಾಜ್ಯವೋ ಎಂಬಂತೆ ದೇಶವನ್ನು ಸಂತೋಷದಿಂದ ಪರಿಪಾಲಿ ಸುತ್ತಿದ್ದನು.



## ಕಾಳಿದಾಸ.

ಶ್ರೀಮದಶೇಷಭೂಮಂಡಲಮಂಡಲಾಯಮಾನವಾಗಿ ರಾಜಿಸುವ ವಂಗ ದೇಶವನ್ನು ಸತ್ಯವಂತನೆಂಬ ರಾಜನು ಪಾಲಿಸುತ್ತಿದ್ದನು. ಈತನು ಕೇವಲ ಧರ್ಮಾತ್ಮನು. ಈ ಮಹಾಶಯನಿಗೆ ಇಂದುಮತಿ ಎಂಬ ಪುತ್ರಿಕಾರತ್ನವಿರು ವಳು. ರಾಜನ ಮುಖ್ಯಮಂತ್ರಿಗೆ ಚೂಡಾಮಣಿಯೆಂಬ ಪುತ್ರನಿದ್ದನು. ಇಂದುಮತಿಯೂ, ಚೂಡಾಮಣಿಯೂ ಸಮಾನ ವಯಸ್ಕರಾದುದರಿಂದ ಚಿಕ್ಕಂದಿನಿಂದಲೂ ಅನ್ಯೋನ್ಯ ಸ್ನೇಹಭಾವವುಳ್ಳವರಾಗಿ ಆಟಪಾಟಗಳನ್ನಾಡಿ ಕೊಳ್ಳುತ್ತಿದ್ದರು ಇವರೀರ್ವರೂ ಬೇರೆಬೇರೆ ಪಾಠಶಾಲೆಗಳಿಗೆ ಹೋಗುತ್ತಿದ್ದರೂ ಆ ಸಮಯದಲ್ಲಿ ವಿನಾ ಮಿಕ್ಕವೇಳೆಗಳಲ್ಲ ಒಬ್ಬರನ್ನೊಬ್ಬರು ಅಗಲದೆ ಸಂತೋ ಷವಾಗಿ ಕಾಲವನ್ನು ಕಳೆಯುತ್ತಿದ್ದರು. ಹೀಗೆ ಕೆಲವುಕಾಲ ಕಳೆಯಲು ಹತ್ತು ವರ್ಷದ ಪ್ರಾಯದವರಾದರು. ಇಂದುಮತಿಗಿಂತಲೂ ಚೂಡಾಮಣಿಯು ಎರಡು-ಮೂರು ವರುಷಗಳು ಮಾತ್ರ ದೊಡ್ಡವನಾಗಿದ್ದನು. ಒಂದುದಿನ ಆಹ್ಲಾದವಾಗಿ ಆಡಿಕೊಳ್ಳುತ್ತಿರುವಾಗ ಚೂಡಾಮಣಿಯು ರಾಜಪುತ್ರಿಯ ಸಂಗಡ “ ಇಂದುಮತೀ, ನಾವೀರ್ವರೂ ಭಾರ್ಯಾ ಭರ್ತರಾಗಿದ್ದರೆ ಬಹು ಚೆನ್ನಾಗಿರುವುದಿಲ್ಲವೇ ? ಸೀತಾರಾಮರಂತೆ ಇರುವೆವಾಗಬಹುದು ! ನೀನು ನಿಮ್ಮ ತಂದೆಯವರಲ್ಲಿ ‘ ನನ್ನನ್ನು ಚೂಡಾಮಣಿಗೆ ಕೊಟ್ಟು ಲಗ್ನಮಾಡಿ ’

ಎಂದು ಕೇಳು. ನಾನೂ ಸಹ ನನ್ನ ತಂದೆಯವರನ್ನು ಕೇಳುತ್ತೇನೆ. ನಾವಾರಂಭಿಸಿರುವ ಈ ಬೊಂಬೆಗಳ ಲಗ್ನದ ಜೊತೆಯಲ್ಲಿಯೇ ನಮ್ಮ ಲಗ್ನವೂಕೂಡ ನೆರವೇರಲಿ. ತರುವಾಯ ನಾವೀರ್ವರೂ ಇದೇ ರೀತಿಯಾಗಿ ಯಾವಾಗಲೂ ಅಗಲದೆ ಚೆನ್ನಾಗಿ ಆಡಿಕೊಳ್ಳಬಹುದು" ಎಂದು ಇಂದುಮತಿಯ ಕಂಠದ ಮೇಲೆ ಬಾಹುವನ್ನು ನೀಡಿ "ಅದೋ ಆ ಪಟದಲ್ಲಿ ನೋಡು ಕೃಷ್ಣನು ರಾಧೆಯನ್ನು ಹೇಗೆ ಮುತ್ತಿಟ್ಟುಕೊಳ್ಳುವನು!" ಎಂದು ಇಂದುಮತಿಯನ್ನು ಥಟ್ಟನೆ ಮುತ್ತಿಟ್ಟುಕೊಳ್ಳಲು ಹೋದನು. ಇಂದುಮತಿಯು ಚಿಕ್ಕವಯಸ್ಸಿನಲ್ಲಿದ್ದರೂ, ಬಹು ವಿವೇಕಶಾಲಿನಿಯಾದುದರಿಂದ ಚೂಡಾಮಣಿಯು ಆಡಿದ ಮಾತಿಗೆ ವಿಷಾದಿಸಿ, ಎರಡು ಕೈಗಳಿಂದ ಅವನನ್ನು ಆ ಕಡೆ ತಳ್ಳಿ ಬಹಳ ಕೋಪದಿಂದ ಈರೀತಿ ಹೇಳಿದಳು—"ಎಲವೋ! ಚೂಡಾವಣೀ, ನೀನು ಕೊಂಚವೂ ಭಯವಿಲ್ಲದೆ ಆಡಬಾರದ ಮಾತುಗಳನ್ನಾಡುತ್ತಿರುವೆ ನೀನು ನಮ್ಮ ತಂದೆಯ ಸೇವಕನ ಪುತ್ರನು. ನಾನು ಮಹಾರಾಜನ ಪುತ್ರಿಯು, ನಾನೆಲ್ಲಿ, ನೀನೆಲ್ಲಿ? ನರಿಯೆಲ್ಲಿ, ದೇವಲೋಕವೆಲ್ಲಿ? ಛೀ! ಬಾಯಿಮುಚ್ಚು. ಇನ್ನುಮುಂದೆ ಇಂತಹ ಕಾಕಘೂಕ ವಚನಗಳನ್ನು ನುಡಿಯದಿರು. ಲೋಕದಲ್ಲಿ ರಾಜಪುತ್ರರೆಷ್ಟೋಜನಗಳಿರಲಾಗಿ, ನಿನ್ನವಶಳಾಗಿ ರಾಜಸೇವಕನಹೆಂಡತಿಯೆನ್ನಿಸಿಕೊಳ್ಳುವುದು ನನ್ನ ಹಣೆಯ ಬರಹವೇನು? ಒಂದುವೇಳೆ ಅನುರೂಪನಾದ ರಾಜಪುತ್ರನಾರೂ ದೊರೆಯದಿದ್ದರೆ ಅವಿವಾಹಿತಳಾಗಿ ಬ್ರಹ್ಮಚಾರಿಣಿಯಾಗಿರುವೆನೇ ಹೊರತು ನಿನ್ನಂಥವನನ್ನು ಲಗ್ನವಾಗುವೆನೇ? ಇದೇ ನನ್ನ ಪ್ರತಿಜ್ಞೆಯೆಂದು ತಿಳಿ" ಎಂದಳು

ಚೂಡಾಮಣಿಯು ಈ ಪ್ರತಿಜ್ಞಾವಾಕ್ಯಗಳನ್ನು ಕೇಳಿ, ನಿಷ್ಕಾರಣವಾಗಿ ಇಷ್ಟು ಕೋಪಿಸಿದುದಕ್ಕೆ ತಕ್ಕ ಪ್ರತೀಕಾರವನ್ನು ಮಾಡಿಯೇ ಬಿಡುವೆನೆಂದು ನೆನೆದು "ಅಹೋ! ಇಂದುಮತೀ, ವ್ಯರ್ಥವಾಗಿ ಇತರರನ್ನು ದೂರಿದಮಾತ್ರವೇ ನೀನು ದೊಡ್ಡವಳಾಗಲಾರೆ. ನಿನ್ನ ವಿವಾಹವನ್ನು ಕುರಿತು ನಿನ್ನ ತಂದೆಯು ನನ್ನ ತಂದೆಯಹತ್ತಿರ ಆಲೋಚಿಸದೆ ಯಾವ ಕಾರ್ಯವನ್ನೂ ಮಾಡಲಾರನು. ರಾಜಕಾರ್ಯಗಳೆಲ್ಲವೂ ಮಂತ್ರಿಯ ಅಧೀನವು, ಮಂತ್ರಿಯ ಇಷ್ಟವಿಲ್ಲದೆ ಒಂದು ಕಾರ್ಯವೂ ಜರುಗಲಾರದು, ಆದುದರಿಂದ ಆ ಕಾಲಕ್ಕೆ ನಾನು

ೇವಿಸಿದ್ದರೆ ಕೇವಲ ಮೂರ್ಖನೂ, ದರಿದ್ರನೂ ಆದ ವರನನ್ನು ತಂದು ನಿನಗೆ ತಿಯನ್ನಾಗಿಮಾಡದಿದ್ದರೆ ನಾನು ಚೂಡಾಮಣಿಯಲ್ಲ, ಇದೇ ನನ್ನ ಪ್ರತಿಜ್ಞೆ" ಂದು ಅತ್ಯಂತ ಕೋಪದಿಂದ ಪ್ರತ್ಯುತ್ತರವನ್ನು ಕೊಟ್ಟನು. ಇಂದುಮತಿಯು ದನ್ನು ಕೇಳಿ—'ಓಹೋ! ನಾನು ನಿನಗಾಗಲಿ, ನಿನ್ನ ತಂದೆಗಾಗಲಿ ವಶ ಾಗಲಾರೆನು. ಬಲವತ್ತರವಾದ ಪೂರ್ವಕರ್ಮವೇ ನನ್ನ ಸುಖದುಃಖಗಳಿಗೆ ಾರಣವು. ಅದನ್ನನುಸರಿಸಿಯೇ ಎಲ್ಲಾ ಕಾರ್ಯಗಳೂ ನಡೆಯುವುವಾದು ರಿಂದ ನೀನೇನನ್ನೂ ಮಾಡಲು ಶಕ್ತನಲ್ಲ' ಎಂದು ಪ್ರತ್ಯುತ್ತರವನ್ನು ಹೇಳಿ ಳು. ಈರೀತಿ ಉಭಯರೂ ಬಾಲ್ಯದಿಂದಲೂ ಹಬ್ಬಿಸಿದ ಸ್ನೇಹಲತೆಯನ್ನು ್ಯರ್ಥವಾಗಿ ಈ ವೈರವೆಂಬ ಕರವಾಲದಿಂದ ಖಂಡಿಸಿ ಪ್ರತಿಯಾಡದೆ ತಮ್ಮ ೃಹಗಳಿಗೆ ತೆರಳಿದರು.

ಹೀಗೆ ಕೆಲಕಾಲ ಕಳೆದನಂತರ ಇಂದುಮತಿಯೂ, ಚೂಡಾಮಣಿಯೂ ೊಡ್ಡವರಾದರು. ರಾಜಕನ್ಯೆಯು ತನಗೂ ಚೂಡಾಮಣಿಗೂ ನಡೆದ ವಾದ ವಾದವನ್ನು ಮರೆತಳು. ಆದರೆ ಚೂಡಾಮಣಿಯು ಮಾತ್ರ ಅದನ್ನು ಮರೆ ಯದೆ ವಿವಾಹ ಸಮಯವನ್ನೇ ಇದುರು ನೋಡುತ್ತಿದ್ದನು ಇಷ್ಟರಲ್ಲಿ ಇಂದು ುತಿಗೆ ವಿವಾಹಯೋಗ್ಯವಾದ ವಯಸ್ಸು ಪ್ರಾಪ್ತವಾಯಿತೆಂದು ಸತ್ಯವಂತನು ಕ್ಕ ವರನನ್ನು ವಿಚಾರಿಸಬೇಕಾಗಿ ಮಂತ್ರಿಯಲ್ಲಿ ಆಲೋಚಿಸಿದನು. ಮಂತ್ರಿ ಯು ಹಾಗೆಯೆ ಆಗಲೆಂದು ಒಪ್ಪಿಕೊಂಡು ಮನೆಗೆ ಬಂದು ಈ ವೃತ್ತಾಂತ ನ್ನು ತನ್ನ ಕುಮಾರನಾದ ಚೂಡಾಮಣಿಗೆ ತಿಳಿಸಿದನು. ಚೂಡಾಮಣಿ ಯು ರಂಧ್ರಾನ್ವೇಷಣಮಾಡುತ್ತಿದ್ದವನಾದುದರಿಂದ ಇದೇ ಸಮಯವೆಂದು ಂದೆಯ ಹತ್ತಿರ ಹೋಗಿ "ಅಪ್ಪಾ, ನೀನು ವೃದ್ಧನು. ದೂರದೇಶವನ್ನು ುರುಗಿ ಶ್ರಮಪಡಲಾರೆ, ಮತ್ತು ರಾಜಪುತ್ರಿಗೆ ತಕ್ಕ ವರನನ್ನು ಕಂಡು ಹಿಡಿ ಯಲಾರೆ. ಇದು ಸುಖಕರವಲ್ಲ. ಎಷ್ಟೋ ವಿಷಯಗಳನ್ನು ಚೆನ್ನಾಗಿ ಪರಿ ೀಲಿಸಬೇಕು. ಇದಕ್ಕೆ ಸ್ಥೈರಣೆಯೂ, ಬುದ್ಧಿಬಲವೂ ಅವಶ್ಯಕ. ಇಷ್ಟೇ ಲ್ಲದೆ ಈ ಕಾರ್ಯವು ಒಂದೆರಡು ದಿನಗಳಲ್ಲಾಗುವುದಲ್ಲ; ಕನಿಷ್ಟಪಕ್ಷ ಒಂದು ಂಗಳಾದರೂ ಬೇಕು. ಇಷ್ಟು ದಿನಗಳು ನೀನು ರಾಜಧಾನಿಯಲ್ಲದಿದ್ದರೆ ಯಾವ ಶತ್ರುಗಳು ಏನು ದುರಾಲೋಚನೆಮಾಡುವರೋ? ಆದುದರಿಂದ

ನೀನು ಹೋಗಕೂಡದು; ನಾನು ಹೋಗಿ ಎಲ್ಲಾ ದೇಶಗಳನ್ನೂ ತಿರುಗಿ, ರಾಜ ಕನ್ಯೆಗನುರೂಪನಾದ ವರನನ್ನು ಹುಡುಕಿಕೊಂಡು ಬರುವೆನು" ಎಂದು ನುಡಿದನು.

ಈ ಮಾತುಗಳನ್ನು ಕೇಳಿ ಕುಮಾರನಿಷ್ಟು ಬುದ್ಧಿಶಾಲಿಯಾಗಿರುವುದಕ್ಕಾಗಿ ಸಂತೋಷಪಟ್ಟನಾದರೂ ರಾಜಾಜ್ಞೆಯಿಲ್ಲದೆ ಸ್ವಯಂ ಸ್ವತಂತ್ರಿಸಿ ತನ್ನ ಮಗನನ್ನು ಕಳುಹಿಸಬಾರದೆಂದು ಆ ಸಮಾಚಾರವನ್ನು ರಾಜನಿಗೆತಿಳಿಸಿದನು. ಈ ಮಾತಿಗೆ ರಾಜನು ಸಂತಸಗೊಂಡು ಮಂತ್ರಿವರಾ, ಈ ವರಾನ್ವೇಷಣ ಕಾರ್ಯವನ್ನು ನಿನ್ನ ಮಗನಿಗೆ ಒಪ್ಪಿಸುವುದಕ್ಕಿಂತ ಉತ್ತಮವಾವುದಿರುವುದು? ಇಂದುಮತಿಯೂ, ನಿನ್ನ ಪುತ್ರನೂ ಬಾಲ್ಯದಿಂದಲೂ ಅತಿ ಮೈತ್ರಿಯಿಂದ ನಡೆದುಕೊಳ್ಳುವರಲ್ಲವೇ? ಆದುದರಿಂದ ನಿನ್ನ ಮಗನು ಇಂದುಮತಿಗೆ ಅನುರೂಪನಾದ ವರನನ್ನು ಹುಡುಕಿ ಕರೆದುಕೊಂಡು ಬರಬಲ್ಲನು. ಈತನನ್ನು ಕಳುಹಿಸುವುದು ನನಗೆ ಸಮ್ಮತವು' ಎಂದು ಹೇಳಿದನು. ಬಳಿಕ ಮಂತ್ರಿಯು ಪರಮಾನಂದ ಭರಿತನಾಗಿ ಪುತ್ರನ ಪ್ರಯಾಣಕ್ಕೆ ತಕ್ಕ ಪರಿವಾರವನ್ನು ಸಿದ್ಧಮಾಡಿದನು.

ಚೂಡಾಮಣಿಯು ತನ್ನ ಮನೋರಥವು ನೆರವೇರುವುದೆಂಬ ಸಂತೋಷದಿಂದ ಬೇಕಾದ ಸಾಮಗ್ರಿಗಳನ್ನೆಲ್ಲ ತೆಗೆದುಕೊಂಡು ಪರಿವಾರದೊಡನೆ ಒಂದೊಂದು ದೇಶಕ್ಕೂ ವರಾನ್ವೇಷಣ ಮಾಡಲು ಹೊರಟನು. ರಾಜಕನ್ಯೆಯೂ ಸಹ ಚೂಡಾಮಣಿಯು ವರಾನ್ವೇಷಣ ಮಾಡಿಕೊಂಡು ಬರಲು ಸಮ್ಮತಿಸಿದಳೇ ಹೊರತು, ಬಾಲ್ಯದಲ್ಲಿ ಜರುಗಿದ ವಿವಾದದ ವಿಚಾರವನ್ನು ಸ್ವಲ್ಪವೂ ಮನಸ್ಸಿಗೆ ತಂದುಕೊಳ್ಳಲಿಲ್ಲ. ಹೀಗೆ ಚೂಡಾಮಣಿಯು ಪ್ರಯಾಣವಾಗಿ ಅಂಗ, ವಂಗ, ಕಳಿಂಗ ನೇಪಾಳಾದಿ ದೇಶಗಳನ್ನು ತಿರುಗಿದನು. ಎಲ್ಲಿಯೂ ಸರಿಯಾದ ವರನು ಲಭಿಸದೇ ಹೋದನು. ದಿನಗಳು, ತಿಂಗಳುಗಳು ಕಳೆದುವು.

ಒಂದು ದಿನ ಅರಣ್ಯ ಮಧ್ಯದಲ್ಲಿ ಪ್ರಯಾಣಮಾಡುತ್ತ ಮಧ್ಯಾಹ್ನ ಸಮಯವಾದುದರಿಂದ ವಿಶ್ರಾಂತಿಗಾಗಿ ಒಂದು ಗಿಡದ ಕೆಳಗೆ ಕುಳಿತುಕೊಂಡು ಈರೀತಿ ಯೋಚಿಸುತ್ತಿದ್ದನು.—ಅಯ್ಯೋ! ದೇಶದೇಶಗಳನ್ನು ತಿರುತಿರುಗಿ

ಬೇಸತ್ತೆನು. ಆದರೂ ಆ ಗರ್ವಾಂಧಳಾದ ಇಂದುಮತಿಗೆ ತಕ್ಕವರನು ಲಭಿಸ ಲಿಲ್ಲ. ಇನ್ನು ನನ್ನ ಅಭೀಷ್ಟವು ನೆರವೇರುವುದು ಹೇಗೆ? ಮನ್ಮಥನನ್ನು ಹೋಲುವ ಸೌಂದರ್ಯವಂತನಾಗಿ, ದರಿದ್ರನಾಗಿ ಅತಿ ಮೂಢನಾದವನು ದೊರ ಕಿದರಲ್ಲವೇ ನನ್ನ ಉದ್ದೇಶವು ನೆರವೇರುವುದು? ಅಂಥವನು ದೊರೆಯುವುದು ಕಡು ದುರ್ಲಭವಾಗಿರುವುದು. ಎಷ್ಟೋ ಪಟ್ಟಣಗಳಲ್ಲಿ ಹಳ್ಳಿಗಳಲ್ಲಿ ಹುಡುಕಿ ಹುಡುಕಿ ಕೊನೆಗೀ ಅರಣ್ಯವನ್ನು ಸೇರಿದೆನು. ಇನ್ನು ಹುಡುಕಬೇಕಾದ ಸ್ಥಳ ವಾವುದಿರುವುದು? ಸಂಕಲ್ಪಕಾರ್ಯಸಿದ್ಧಿಯಾಗದಿರುವುದರಿಂದ ಮನಸ್ಸಿನ ಉತ್ಸಾಹವು ತಗ್ಗುತ್ತಿರುವುದು. ಯಾವ ಕೆಲಸ ಮಾಡುವುದಕ್ಕೂ ತೋರದಿ ರುವುದು. ನಾನು ಕೋರಿರುವ ವರನು ಬ್ರಾಹ್ಮಣನಾಗಲಿ, ಕ್ಷತ್ರಿಯನಾಗಲಿ ಇಲ್ಲವೇ ನೀಚಕುಲಜನಾದರೂ ಕರೆದುಕೊಂಡು ಹೋಗಿ, ಸುಳ್ಳಾದರೂ ಹೇಳಿ ಕಾರ್ಯಸಾಧನೆ ಮಾಡಿಕೊಳ್ಳಬೇಕು ರೂಪವಂತನೂ, ಯೌವನವಂತನೂ ದೊರೆತರೆ ಅವನಿಗೆ ವಸ್ತ್ರ-ಭೂಷಣಾದ್ಯಲಂಕಾರಗಳನ್ನು ಮಾಡಿ, ಪಂಡಿತನೆಂತ ಲೂ, ಶೂರನೆಂತಲೂ ಹೇಳಿ ನನ್ನ ಬುದ್ಧಿಚಾತುರ್ಯದಿಂದ ಆ ಇಂದುಮತಿಯು ವರಿಸುವಂತೆ ಮಾಡಿ, ರಾಜನನ್ನೂ, ರಾಜಪುತ್ರಿಯನ್ನೂ ವೋಸಗೊಳಿಸಿ, ವಿವಾ ಹವನ್ನು ಪೂರ್ತಿಮಾಡುವೆನು ಜರುಗಬೇಕಾದ ಕಾರ್ಯವಿಷ್ಟು ಆದಂದಿಗ ಲ್ಲದೆ ನನ್ನ ಕೋಪವು ಶಾಂತವಾಗಲಾರದು."

ಹೀಗೆ ಆಲೋಚಿಸಿ ಆ ಅರಣ್ಯದಲ್ಲಿ ಸ್ವಲ್ಪಕಾಲ ವಿಶ್ರಮಿಸಿಕೊಂಡನು. ಇಷ್ಟರಲ್ಲಿಯೇ ಕುರುಬನೋರ್ವನು ಕೈಯಲ್ಲಿ ಕೊಡಲಿಯನ್ನು ಹಿಡಿದುಕೊಂಡು ಆ ಕಡೆಗೆ ಬರುತ್ತಿದ್ದನು. ಅವನ ರೂಪವೂ, ಸಹಜ ಲಾವಣ್ಯವೂ ಮಂಕುತನ ದಿಂದ ಮುಚ್ಚಲ್ಪಟ್ಟಿದ್ದರೂ ಸ್ವಲ್ಪ ದೃಷ್ಟಿಯನ್ನು ಪಸರಿಸಿ ಅವಯವ ಸೌಂದರ್ಯ ವನ್ನು ನೋಡಿದರೆ ಬಹುಸ್ಫುರದ್ರೂಪಿಯೆಂದು ಹೊರಪಡದಿರಬಾರನು ವೇಷ ವನ್ನು ನೋಡಿದರೆ ಮಾತ್ರ ಕುರುಬ (ಕುರಿಕಾಯುವವ) ನೆಂದು ಸ್ಪಷ್ಟಪಡು ವುದು ಅವನು ಏನೇನೋ ತಿಳಿವಿಲ್ಲದ ಅಸಂಬದ್ಧವಾದ ಮಾತುಗಳನ್ನಾಡುತ್ತ ತಾಳೆಗರಿಯ ಗುಡಿಸಿಲಿಗಾಗಿ ಗೂಟಗಳನ್ನು ಕಡಿಯಲು ಒಂದು ಮರದ ಬಳಿಗೆ ಬಂದನು.

ಚೂಡಾಮಣಿಯು ಅವನನ್ನು ನೋಡಿ ಅವನ ಸೌಂದರ್ಯ ಲಾವಣ್ಯಗಳಿ

ಗಾಶ್ಚರಪಟ್ಟು 'ಆಹಾ! ಇಂತಹ ಸರ್ವಲಕ್ಷಣ ಶೋಭಿತನಾದ ಪ್ರಾಯದವ ನನ್ನು ಇದುವರೆಗೂ ಎಲ್ಲಿಯೂ ನೋಡಿರಲಿಲ್ಲ. ಈತನ ಹಸನ್ಮುಖವೋ, ಅತಿ ವಿಶಾಲವಾಗಿ ಶೋಭಿಸುವ ಕಿವಿಗಳೋ, ಆಜಾನು ಬಾಹುಗಳೋ, ವಿಶಾಲವಾದ ವಕ್ಷಸ್ಥಲವೊ, ಬಾಳೆಯ ಕಂಬದಂತಹ ತೊಡೆಗಳೋ! ಸುಂದರವಾದ ಈತನ ಅವಯುವಗಳನ್ನು ನೋಡಲಾಗಿ ಕ್ಷತ್ರಿಯ ಕುಮಾರನಾಗಿದ್ದು ಯಾವ ಕಾರಣ ದಿಂದಲೋ ಕಿರಾತರಲ್ಲಿ ಕಲೆತಿರಬಹುದೆಂದು ತೋರುವುದು. ಇಂತಹ ರೂಪ ವಂತನಾಗಿದ್ದ ಮಾತ್ರವೇ ಲಾಭವೇನು? ಓದು-ಬರಹವಿಲ್ಲದ ಮೂಢನಾಗಿರ ಬಹುದಲ್ಲವೇ? ಇವನು ಅಂಥವನಾಗಿರುವ ಪಕ್ಷದಲ್ಲಿ ನನ್ನ ಮನೋರಥ ವೃಕ್ಷವು ಫಲೋಪಯುವಾಯಿತೆಂದೇ ನಂಬುತ್ತೇನೆ ಸಾವಿರವಾಲಿಗೆ ಇಂತಹ ಸುಲಕ್ಷಣವಂತನು ಮೂಢನಾಗಿರಲಾರನು ಸ್ವಲ್ಪಕಾಲ ಇವನ ಚೇಷ್ಟೆಗಳನ್ನು ನೋಡಿದರೆ ನನ್ನ ಸಂಶಯನಿವೃತ್ತಿಯಾಗುವುದು" ಎಂದು ಆಲೋಚಿಸುತ್ತಿ ದ್ದನು. ಆ ಬಳಿಕ ಮೂಢನು-ಅನಾಗರಿಕ ಶಿಖಾಮಣಿಯು-ಕೊಡಲಿಯನ್ನು ಕೈಯಲ್ಲಿ ಹಿಡಿದುಕೊಂಡು ಮೆಲ್ಲನೆ ಮರವನ್ನುಹತ್ತಿ ಒಂದು ಕೊಂಬೆಯಮೇಲೆ ಕುಳಿತು ಅದೇ ಕೊಂಬೆಯನ್ನೇ ಕಡಿದು ನೆಲದಮೇಲೆ ಬಿದ್ದು 'ಅಬ್ಬಾ' ಎಂದು ಎದ್ದು ಧೂಳಿಯನ್ನು ಒರಸಿಕೊಳ್ಳುತ್ತ, ಮತ್ತೆಮತ್ತೆ ಕೊಂಬೆಗಳಮೇಲೆ ಹತ್ತುತ್ತಾ, ಕಡಿಯುತ್ತಾ, ಬೀಳುತ್ತಾ, ಏಳುತ್ತಾ, ಅಬ್ಬಾ! ಅಬ್ಬಾ!! ಎಂದೆ ನ್ನುತ್ತಿದ್ದನು ಈ ಮೂಢಶಿಖಾಮಣಿಯನ್ನು ನೋಡಿ "ಆಹಾ! ನಾನೆಂಥ ವನನ್ನು ಸಂಪಾದಿಸಲೆಳಸಿದೆನೋ, ಅಂಥವನೇ ವಿಧಿವಶದಿಂದ ದೊರೆತನು. ಕೊಂಬೆಯಮೇಲೇರಿ ಅದೇ ಕೊಂಬೆಯನ್ನೇ ಕತ್ತರಿಸುವನೆಂಥ ಮೂಢನಿರಬ ಹುದು? ಆದುದರಿಂದ ಇವನೇ ತಕ್ಕವನು" ಎಂದು ಬಗೆದು ಅವನ ಸವಿಾ ಪಿಸಿ—"ಎಲವೋ ಇಲ್ಲಿ ಬಾ" ಎಂದು ಕರೆದನು, ಆ ಮೂಢನು ಚೂಡಾ ಮಣಿಯನ್ನು ನೋಡಿ ಬೆದರಿ ಅಬ್ಬಾ! ಇದಾವುದೋ ಭೂತವು ನನ್ನನ್ನು ಕರೆಯುವುದೆಂದು ಗಡಗಡನೆ ನಡುಗುತ್ತ ಕಕ್ಕಾಬಿಕ್ಕಿ ಕಪಿಯಂತೆ ನೋಡುತ್ತಿ ದ್ದನು. ಚೂಡಾಮಣಿಯು ಇವನ ಅಜ್ಞಾನಕ್ಕೆ ಆಶ್ಚರ್ಯಪಟ್ಟು 'ಬ್ರಹ್ಮ ಸೃಷ್ಟಿಯಲ್ಲಿ ಇಂಥವನು ಸಹ ಇರುವನಲ್ಲವೇ?" ಎಂದು ನಯವಿನಯದಿಂದ ಅವನನ್ನು ಬುಜ್ಜುಗಿಸಿ, ತನ್ನ ಸಂಗಡ ಒರುವಂತೆ ಬೋಧಿಸಿ, ರಾಜಪುತ್ರಿಕಾ ರತ್ನವನ್ನು ಅವನಿಗೆ ಕೊಡಿಸುವುದಾಗಿ ಹೇಳಿ, ಅಸಭ್ಯ ವಾಕ್ಯಗಳನ್ನಾಡದಂತೆ

ಕಟ್ಟುಮಾಡಿ, ಭಯ-ಭಕ್ತಿ-ವಿನಯಗಳನ್ನು ಕಲಿಸಿ ಸಕಲ ರತ್ನಾಭರಣಗಳಿಂದಲೂ, ದಿವ್ಯ ವಸ್ತ್ರಗಳಿಂದಲೂ ಅಲಂಕರಿಸಿ ರಥದಮೇಲೆ ಕುಳ್ಳಿರಿಸಿಕೊಂಡು ಪ್ರಯಾಣಮಾಡಿದನು.

ಹೀಗೆ ಚೂಡಾಮಣಿಯು ಲಬ್ಧಮನೋರಥನಾಗಿ ರಾಜಧಾನಿಗೆ ಹಿಂತಿರುಗಿ ಬರುತ್ತಿರಲು ಪಟ್ಟಣದ ದೊಡ್ಡದೊಡ್ಡ ಉಪ್ಪರಿಗೆಗಳನ್ನು ನೋಡಿ, ಆ ಮೂಢನು ಅತ್ಯಾಶ್ಚರ್ಯ ಚಕಿತನಾಗಿ ಆಡುವ ಹುಚ್ಚುಮಾತುಗಳನ್ನು ದಂಡೋಪಾಯದಿಂದ ನಿವಾರಿಸಿ—'ಎಲವೋ ರಾಜಕುಮಾರಿಯನ್ನು ಲಗ್ನವಾಗುವವರೆಗೂ ಬಾಯಿಮುಚ್ಚಿಕೊಂಡಿರು' ಎಂದು ಬೆದರಿಸಿದನು. ಆಗಲಾ ಮೂಢನು ಚೂಡಾಮಣಿಯ ಮಾತನ್ನು ಮೀರಿದರೆ ಏನು ಮಾಡುವನೋ ಎಂದು ಭಯಪಟ್ಟುಕೊಂಡು ಎರಡುಕೈಗಳಿಂದ ಬಾಯನ್ನು ಬಿಗಿಯಾಗಿ ಮುಚ್ಚಿಕೊಂಡನು. ಚೂಡಾಮಣಿಯು ಇದನ್ನು ನೋಡಿ—ಛೀ! ಇಂತಹ ಮೂಢನನ್ನು ಇದುವರೆಗೆ ಎಲ್ಲಿಯೂ ನೋಡಲಿಲ್ಲವೆಂದುಕೊಂಡು 'ಎಲೋ ಮೂಢ, ಮಾತನಾಡಬೇಡೆಂದು ಹೇಳಿದೆನೇ ಹೊರತು ಎರಡು ಕೈಗಳಿಂದ ಬಾಯಿಮುಚ್ಚಿಕೊಳ್ಳೆಂದು ಹೇಳಲಿಲ್ಲ' ಎಂದು ಅವನ ಬಾಯಿಯ ಮೇಲಿಂದ ಕೈಗಳನ್ನು ತೆಗೆಸಿ, ಕೆಲಕೆಲವು ಶಬ್ದಗಳನ್ನು ಅವನಿಂದ ಹೇಳಿಸುತ್ತಿದ್ದನು. ತರುವಾಯ ಚೂಡಾಮಣಿಯು ತಾನು ವರನನ್ನು ಕರೆದುಕೊಂಡು ಬಂದ ವೃತ್ತಾಂತವನ್ನು ರಾಜನಿಗೆ ತಿಳಿಸಿದನು. ರಾಜನೂ, ಮಂತ್ರಿಯೂ, ಕೆಲವು ಜನ ಪೌರರೂ ಉತ್ತಮ ವರನನ್ನು ಕರೆದು ತಂದಿರುವನೆಂದು ಸಂತೋಷಯುತರಾಗಿ ಆತನನ್ನು ಇದಿರ್ಗೊಂಡು ದಿವ್ಯವಾದ ರಾಜಭವನವೊಂದರಲ್ಲಿ ಬಿಡದಿ ಮಾಡಿಸಿದರು.

ಇದಾದಮೇಲೆ ಸತ್ಯವಂತನು ಚೂಡಾಮಣಿಯನ್ನು ಕರೆಸಿಕೊಂಡು ಆ ವರನ ವೃತ್ತಾಂತವನ್ನು ವಿಚಾರಿಸಿದನು. ಚೂಡಾಮಣಿಯು ಈರೀತಿಯಾಗಿ ಹೇಳಿದನು—"ರಾಜವರೇಣ್ಯಾ, ನಾವಿಷ್ಟು ದಿನಗಳೂ ವರಾನ್ವೇಷಣಕ್ಕಾಗಿ ಪಟ್ಟ ಕಷ್ಟಗಳೆಲ್ಲವೂ ಇಂದಿಗೆ ಸುಖಪ್ರದಗಳಾದುವು. ನೀನು ಮಾಡಿದ ಪೂರ್ವಜನ್ಮದ ಪುಣ್ಯದ್ರುಮವು ಫಲಿಸಿತು. ನಿಮ್ಮ ವಂಶವೆಲ್ಲವೂ ಪವಿತ್ರವಾಯಿತು. ಈಗ ನಿನ್ನ ಸುಕುಮಾರಿಗೆ ಒದಗುವ ವರನು ಮನೋಜರೂಪಧಾರಿಯಾದ

ಸರಸ್ವತಿಯೇ ಎಂದು ನಿಸ್ಸಂದೇಹವಾಗಿ ಹೇಳಬಹುದು. ಎಷ್ಟೆಷ್ಟೋ ದೇಶಗಳನ್ನು ತಿರುಗಿ ತಿರುಗಿ ಕೊನೆಗೆ ಗೌಡದೇಶದಿಂದ ಈ ಮಾನವ ಲೋಕದ ಬೃಹಸ್ಪತಿಯನ್ನು ಕರೆದುಕೊಂಡು ಬಂದೆನು ಈತನು ಮಹಾಶೂರನು; ಮಹಾವಿದ್ವಾಂಸನು, ಈತನಿಗೆ ತಿಳಿಯದ ವಿದ್ಯೆಯಾವುದೂ ಇಲ್ಲ. ರೂಪವನ್ನು ನೋಡಿಯೇ ಇರುವಿರಲ್ಲವೇ? ಈತನು ರಾಜಪುತ್ರಿಗೆ ಅನುರೂಪನಾದ ವರನು. ಉತ್ತಮೋತ್ತಮ ವಂಶಜಾತನು. ನನ್ನ ನಿರ್ಬಂಧವಾದ ಪ್ರಾರ್ಥನೆಯನ್ನಂಗೀಕರಿಸಿ ನಿನ್ನ ಮಗಳ ಪಾಣಿಗ್ರಹಣಕ್ಕೊಡಂಬಟ್ಟು ನಿಮ್ಮ ವಂಶವನ್ನು ಅನುಗ್ರಹಿಸಲು ಇಲ್ಲಿಗೆ ಬಂದಿರುತ್ತಾನೆ." ಎಂದು ಹೇಳುವ ಚೂಡಾಮಣಿಯ ವಾಕ್ಯಗಳು ರಾಜನಿಗೆ ಕರ್ಣಾನಂದಗಳಾದುವು. ತದನಂತರ ರಾಜನ ಬಂಧುವರ್ಗದವರು ಕೆಲವರು ವರನನ್ನು ನೋಡಲೈತಂದರು. ಎದೆಯನ್ನು ಸೀಳಿ ಪಂಜುಹಿಡಿದು ಬೆದಕಿ ನೋಡಿದರೂ ಅಕ್ಷರದ ವಾಸನೆಯೆಂಬುವ ಗಂಧವಿಲ್ಲದ ಈ ನಿರಕ್ಷರಕುಕ್ಷಿಯು ಸಲಕ್ಷಣವಂತನಾಗಿ ಮಾತ್ರ ಶೋಭಿಸುತ್ತಿದ್ದನು. ಬಂದವರೆಲ್ಲರೂ ಇವನ ಸೌಂದರ್ಯಾತಿಶಯಕ್ಕೆ ಬೆರಗಾಗಿ ಚೂಡಾಮಣಿಯು ಹೇಳಿದ ಮಾತುಗಳೆಲ್ಲವೂ ಸತ್ಯವೆಂದೇ ನಂಬಿದರು.

ಇದಾದಮೇಲೆ ಸರ್ವರೂ ಸಮ್ಮತಿಸಲಾಗಿ ತನ್ನ ಸುತೆಗನುರೂಪನೆಂದು ಬಗೆದು ರಾಜನು ಶುಭದಿನ ಶುಭಮುಹೂರ್ತದಲ್ಲಿ ವಿವಾಹವನ್ನು ಮಾಡಲು ನಿಶ್ಚಯಿಸಿದನು. ಅದುವರೆಗೂ ಮೂರ್ಖಶಿಖಾಮಣಿಯನ್ನು ಹುಚ್ಚುಹುಚ್ಚಾಗಿ ಕೂಗದಂತೆ ತಡೆಯುವುದು ಚೂಡಾಮಣಿಗೆ ವಿಶ್ವಪ್ರಯತ್ನವಾಯಿತು. ವರನನ್ನು ಪರೀಕ್ಷಿಸುವ ನೆಪದಿಂದ ಎಷ್ಟೋ ಜನಗಳು ಬಂದು ಹೋಗುತ್ತಿದ್ದರು. ಈ ವಾಡಿಕೆಯು ಸರ್ವ ದೇಶಗಳಲ್ಲಿಯೂ, ಸರ್ವ ಕಾಲಗಳಲ್ಲಿಯೂ ಸಹಜವಾದುದಾಗಿಯೇ ಇರುವುದು.

ಇಂತಹ ಸಮಯದಲ್ಲಿ ಚೂಡಾಮಣಿಯು ವರನ ಹತ್ತಿರದಲ್ಲಿದ್ದು ಬಾಯಿಬಿಡದಂತೆ ನಿರ್ಬಂಧಿಸುತ್ತಿದ್ದರೂ, ಒಂದಾನೊಂದು ಸಮಯದಲ್ಲಿ ತನ್ನ ಅವಿವೇಕವನ್ನು ಪ್ರಕಾಶಪಡಿಸುತ್ತಿದ್ದನು. ಆದರೂ ಅವನ ಅಸಂಬದ್ಧ ಪ್ರಲಾಪಗಳನ್ನೆಲ್ಲವನ್ನೂ ಚೂಡಾಮಣಿಯು ತನ್ನ ವಾಕ್ಚಾತುರ್ಯದಿಂದ ಸಮರ್ಥಿಸುತ್ತಿದ್ದನು. ಹೀಗೆ ನಾಲ್ಕು ದಿನಗಳೂ ನಾಲ್ಕು ಯುಗವಾಗಿ ಪರಿಣಮಿಸಿದವು.

ಮರುದಿನ ವಿವಾಹಮಹೋತ್ಸವವೆಂದು ಎಲ್ಲಾ ಕಡೆಯಲ್ಲಿಯೂ ಪ್ರಚು ರಪಡಿಸಿದರು. ಸಕಲ ಸಾಮಂತರಾಜರೂ ಪರಿವೇಷ್ಟಿಸಿರಲಾಗಿ, ಮಂಗಳವಾದ್ಯಗಳು ದಶದಿಶೆಗಳಲ್ಲಿಯೂ ಪ್ರತಿಧ್ವನಿ ಮಾಡುತ್ತಿರಲು ಶುಭಮುಹೂರ್ತದಲ್ಲಿ ಕಲ್ಯಾಣಮಂಟಪವನ್ನು ಸೇರಿಸಿ ಚೂಡಾಮಣಿಯು ಅಂತೂಇಂತು ಯಾವ ವಿಧದಿಂದಲೋ ವಿವಾಹವನ್ನು ಪೂರ್ತಿಮಾಡಿಸಿದನು ವಧೂವರರು ಹರೆಯ ದವರಾದುದರಿಂದ ವಿವಾಹಾನಂತರ ಗರ್ಭಾದಾನವನ್ನು ಕೂಡ ಮಾಡಬಹು ದೆಂದು ನಿಶ್ಚಯಿಸಿ ಕರ್ತವ್ಯ ಕ್ರಿಯಾಕಲಾಪಗಳನ್ನು ಮುಗಿಸಿ ತದನಂತರ ವಧೂವರರನ್ನು ಶಯ್ಯಾಗೃಹಕ್ಕೆ ಕಳುಹಿಸಿದರು ಆ ಭವನವು ದಿವ್ಯ ಮಣಿಗಳಿಂದಲಂಕೃತವಾಗಿ ನಿಲುವುಕನ್ನಡಿಗಳಿಂದ ರಾಜಿಸುತ್ತಿದ್ದುದರಿಂದ ಈ ಅರಣ್ಯ ದ್ವಿಪಾದಪಶುವಿಗೇನೂ ತೋಚದೆ, ಮಾರ್ಗವೂ ತಿಳಿಯದೆ ಅತಿ ಪ್ರಯಾಸ ದಿಂದ ಭವನದೊಳಪೊಕ್ಕನು!

ವರನೀರೀತಿಯಾದ ವಿಚಿತ್ರಗಳನ್ನೆಂದೂ ನೋಡದವನಾದುದರಿಂದ ಏನೇನೋ ವಿಕಲ್ಪವಾಗಿ ಹೇಳಿಕೊಳ್ಳುತ್ತ ನೋಡಿಕೊಳ್ಳುತ್ತ ಚೂಡಾಮಣಿಯ ಭಯದಿಂದ ಮಾತನಾಡದೆ ಸುಮ್ಮನಿದ್ದನು ಇಂದುಮತಿಯಾದರೋ ಅತಿ ಲಾವಣ್ಯವತಿ, ಮಹಾಮೇಧಾವಿನಿ, ಬಹುಕಾಲ ಗುರುಶುಶ್ರೂಷೆಯನ್ನು ಮಾಡಿ ಆಚಾರ್ಯಮುಖದಿಂದ ಅನೇಕ ವಿದ್ಯೆಗಳನ್ನು ಕಲಿತ ವಿದ್ಯಾವತಿ ಇಂತಹ ಸಕಲ ಗುಣಗಣ ಶೋಭಿತೆಯಾದಾ ವನಿತಾತಿಲಕವೆಲ್ಲ? ಅಡವಿಯಲ್ಲ ಕುರಿಗಳಮಂದೆ ಯನ್ನು ಕಾಯುವ ಕಾಡುಕುರುಬನೆಲ್ಲಿ? ವಿಧಾತನು ಸಂಘಟಿಸಿರುವ ಈ ದಾಂಪತ್ಯ ವೈಭವವು ಹೇಗಿರುವುದೋ ನೋಡಿರಿ!

ನೂತನಾಭಾಗ್ಯವರನು ಆಗಾಗ ತನ್ನ ಪ್ರಯತ್ನವಿಲ್ಲದೆ ಪ್ರಮಾದವ ಶಾತ್ ಉಚ್ಚರಿಸುವ ಗ್ರಾಮ್ಯೋಕ್ತಿಗಳನ್ನು ಕೇಳಿಯೂ, ಮಾತನಾಡಿಸಿದರೂ ಮಾತನಾಡದೆ ಬೆಲ್ಲವನ್ನು ಕಟ್ಟಿದಕಲ್ಲಿನಂತೆ ಸುಮ್ಮನಿರುವುದನ್ನು ನೋಡಿಯೂ ಇಂದುಮತಿಯೂ, ಈಕೆಯ ಆಪ್ತಸಖಿಯರೂ ಸೇರಿ ಮದುಮಗನ ವಿಷಯವಲ್ಲಿ ಅನುಮಾನವುಂಟಾಗಿ ಪರಸ್ಪರ ಒಬ್ಬರಿಗೊಬ್ಬರು ಏನೇನೋ ಮಾತನಾಡಿಕೊಳ್ಳುತ್ತಿದ್ದರು. ಆದರೂ ಕಾರ್ಯವು ಮುಗಿದಮೇಲೆ ಮೂಢನೆಂದು ತಿಳಿದರೆ ಲಾಭ ವೇನಿರುವುದು? ಗತಜಲಸೇತುಬಂಧನವಲ್ಲವೇ?

ಆ ಬಳಿಕ ಕ್ರೀಡಾಮಂದಿರದಲ್ಲಿ ದಾಸೀ ಜನಗಳು ಸಂಗೀತೋಪಕರಣಗಳಾದ ವೀಣಾದಿ ವಾದ್ಯಗಳನ್ನು ಸಿದ್ಧಪಡಿಸಿ ಹೊರಟುಹೋದರು ಮದುಮಗನು ಕೇಳೀಮಂದಿರಕ್ಕೆ ಕಳುಹಿಸಲ್ಪಡುತ್ತಲೇ ಆತುರವಾಗಿ ಸುಪ್ಪತ್ತಿಗೆಯ ಮೃದುವಾದ ಹಾಸಿಗೆಯು ದೊರೆಯಿತೆಂದು ಹಾಯಾಗಿ ಮಲಗಿ ಗೊರಕೆಗಳನ್ನಿಡುತ್ತ ನಿದ್ರಿಸುತ್ತಿದ್ದನು. ಇಂದುಮತಿಯು ಪ್ರೌಢೆಯಾದುದರಿಂದ ತನ್ನ ಪ್ರಿಯನು ಹತ್ತಿರ ಸೇರದಿರುವುದೇನು ಕಾರಣವೆಂದು ಚಿಂತಿಸುತ್ತ ವಿರಹಾಗ್ನಿ ಸಂತಪ್ತಳಾಗಿ ಪರಿತಪಿಸುತ್ತಿದ್ದಳು. ಸ್ವಲ್ಪ ಹೊತ್ತು ಆಲೋಚಿಸಿ ತನ್ನ ಪ್ರಿಯನು ಪ್ರಾಯಶಃ ದೇಹಾಯಾಸದಿಂದ ನಿದ್ರಾಪರವಶನಾಗಿರುವನೆಂದು ಬಗೆದು ಜಾಗ್ರತೆ ನಿದ್ರೆಯಿಂದೆಚ್ಚರಿಸಬೇಕೆಂದು ಅತ್ತರು, ಪನ್ನೀರು ಮೊದಲಾದ ಸುಗಂಧ ಪುಷ್ಪಸಾರಗಳನ್ನು ಮೈಮೇಲೆರಚಿದಳು ಸ್ವಲ್ಪ ಹೊತ್ತು ಕಲ್ಲುಕರಗುವಹಾಗೆ ವೀಣೆಯನ್ನು ನುಡಿಸುತ್ತ ಸಂಗೀತವನ್ನು ಹಾಡಿದಳು. ಪ್ರಿಯನಿಗೆ ಎಚ್ಚರವಾಗಲಿಲ್ಲ !

ತೆರುವಾಯ ಅತಿ ಸಮೀಪದಲ್ಲಿ ಕುಳಿತು ಮತ್ತೊಂದು ವೇಳೆ ಮಧುರವಾಗಿ ಹಾಡಿದಳು (ಬೀಸಣಿಗೆ) ಪಂಕವನ್ನು ಕೈಗೊಂಡು ಬೀಸಿದಳು. ಎಷ್ಟೋ ಸುಕುಮಾರಗಳಾದ ಪ್ರಬೋಧನೋಪಾಯಗಳನ್ನು ಮಾಡಿದಳು ಎಷ್ಟು ಮಾಡಿದರೇನು ? ಆ ಮಹಿಷಪ್ರಿಯನಿಗೆ ಎಚ್ಚರವಾದೀತೇ ? ಹೀಗೆ ಕೆಲವು ಕಾಲದವರೆಗೆ ಶೈತ್ಯೋಪಚಾರಗಳನ್ನು ಮಾಡಿ ಬೇಸತ್ತು, ಬೇರೊಂದು ಕಡೆ ಸುಮ್ಮನೆ ಕುಳಿತುಕೊಂಡಳು ಇಷ್ಟರಲ್ಲಿ ಎದೆಗುಂಡಿಗೆ ಹೊಡೆಯುವಂತೆ ಹೆಬ್ಬಾವು ಬುಸುಗುಟ್ಟುವಂತೆ ಧ್ವನಿ ಕೇಳಿಸಿತು. ಇಂದುಮತಿಯು ದಿಗುಲುಬಿದ್ದಳು ಆ ಧ್ವನಿಯೇನಿರಬಹುದೆಂದೂಹಿಸಲಾರದೆಹೋದಳು. ಅದು ಮತ್ತೇನೂ ಅಲ್ಲ, ಆ ರಸಾಭಾಸಿಯಾದ ಮದುಮಗನ ನಿದ್ರೆಯ ಗೊರಕೆ! ಇಂದುಮತಿಯು ಆ ವಿಕಾರವಾದ ಗೊರಕೆಯು ತನ್ನ ಪ್ರಾಣನಾಥನದೆಂದು ತಿಳಿದು ಚಿತ್ತದಲ್ಲಿ ತತ್ತರಗೊಳ್ಳುತ್ತಿದ್ದಳು.

"ಅಯ್ಯೋ! ನನ್ನ ಪ್ರಾಣನಾಯಕನೇ ಹೀಗೆ ಗೊರಕೆ ಇಡುತ್ತಿರುವನು ? ಈ ಮಹತ್ವವೆನ್ನ ನೋಡಲತಿ ವಿಚಿತ್ರವಾಗಿ ಕಾಣುವುದು. ಉತ್ತಮ

)ರುಷಲಕ್ಷಣಯುತವಾದ ಈತನ ದಿವ್ಯ ಸೌಂದರ್ಯವೆಲ್ಲಿ, ಕೇವಲ ಮೌಢ್ಯ ುಕ್ತವಾದ ಈ ಗೊರಕೆಯೆಲ್ಲಿ? ಇದನ್ನು ನೋಡಿದರೆ ಈತನಿಗೆ ಚಂದ್ರನಲ್ಲಿ 'ಳಂಕವುಂಟಾಗಿರುವಂತೆ ಆವುದೋ ಕೊರತೆಯುಂಟಾಗಿರುವುದು. ಇಂತಹ ೊರಕೆಯೂ ಗಾಢನಿದ್ರೆಯೂ ಶರೀರಾಯಾಸದಿಂದ ಉಂಟಾಗುವುದು ಸಹ ವು. ವಿವಾಹಕಾರ್ಯ ಸಮ್ಮರ್ದನದಲ್ಲಿ ವೇಳೆಗೆ ನಿದ್ರಾಹಾರಗಳು ಲಭಿಸದೆ ತ್ಯಾಯಾಸ ಹೊಂದಿ ಈ ಸುಕುಮಾರನು ಹೀಗಿರುವನಾಗಬಹುದೇ? ಹತ್ತಿ ಕ್ಕೆ ಹೋಗಿ ಸಾಹಸಮಾಡಿ ತಟ್ಟಿ ಎಚ್ಚರಿಸಿ ನೋಡುವೆನು" ಎಂದು ತನ್ನ ಜ್ಜೆಯನ್ನು ಬುಜ್ಜುಗಿಸಿ ಮಂಚದ ಹತ್ತಿರ ಸೇರಿದಳು.

ಆ ಅವಿವೇಕಶಿಖಾಮಣಿಯು ಮೊಳಕಾಲುಗಳನ್ನು ಹೊಟ್ಟೆಯಲ್ಲಿ ತೂರಿ ಕೊಂಡು ವಿಕಾರವಾಗಿ ಮಳೆಯಲ್ಲಿ ನೆನೆದ ಗುಬ್ಬಚ್ಚಿಯಂತೆ, ಸಿಂಬೆಗಟ್ಟಿ ುಲಗಿರುವ ಹಾವಿನಂತೆ ಮಲಗಿಕೊಂಡಿದ್ದನು. ಇದು ಭಾಗ್ಯವಂತರಾದ ಾಗರಿಕರ ಲಕ್ಷಣವಲ್ಲವು. ಅವಯವ ಲಕ್ಷಣವನ್ನು ನೋಡಿ ಇಂದುಮತಿಯ ಹೃದಯವು ಮತ್ತೂ ಸಂಶಯ ಗ್ರಸ್ತವಾಯಿತು, ಕೊನೆಗೆ ಮನಸ್ಸನ್ನು ಸಮಾಧಾನಕ್ಕೆ ತಂದುಕೊಂಡು, ಥಟ್ಟನೆ ಗಲ್ಲವನ್ನು ಹಿಡಿದುಕೊಂಡು ಮುದ್ದಾ ಿದಳು. ಛೀ! ಛೀ!! ಎಂದು ಸೀತ್ಕಾರ ಮಾಡುತ್ತಾ ಕೈಗಳನ್ನು ಹಿಡಿದು ೨ ಕಡೆ ತಳ್ಳಿ, ಬಾಯಿ ತೆರೆದುಕೊಂಡು ಅಂಗತಂಗನಾಗಿ ಮಲಗಿಕೊಂಡನು.

ಇಂದುಮತಿಯು ಮತ್ತೆ ನಿದಾನಿಸಿ ನೋಡೋಣವೆಂದು ಕಸ್ತೂರೀ ಕರ್ಪೂರಾದಿ ಸುಗಂಧ ದ್ರವ್ಯಗಳಿಂದ ಮಘಮಘಿಸುವ ತಾಂಬೂಲವನ್ನು ಕುಟ್ಟಿ ಅವನ ಬಾಯಿಯಲ್ಲಿ ಬೀಳುವಂತೆ ಹಾಕಿದಳು. ಆಗಲಾ ಕಾಡುಕುರುಬನು ಕೇಕರಿಸುತ್ತಾ "ಎಲೋ! ಕುರಿಹಿಕ್ಕೆಯನ್ನು ಹಾಕುವುದು, ದೊಪ್ಪಕ್ಕೆ ಹೊಡ್ಕ್ಕೊ ದುಕೊಂಡು ಹೋಗೋ: ಕಾಟಣ್ಣಾ" ಎಂದು ಗಟ್ಟಿಯಾಗಿ ಅರಚಿಕೊಳ್ಳುತ್ತ ಮೇಲಕ್ಕೆದ್ದನು.

ಇನ್ನಾದರೂ ಮೂಢಶಿಖಾಮಣಿಯೆಂದು ಹೇಳಲು ಸಂಶಯವೇನಿರು ವುದು? ಇಂದುಮತಿಯು ತನಗಿಂತಹ ಮೂಢಪತಿಯು ಲಭಿಸಿದನೆಂದು ತಿಳಿದ ಬಳಿಕ ಹೇಗೆ ಪರಿತಪಿಸಿರಬಹುದೋ ಪಾಠಕರೇ ಊಹಿಸಬಹುದು.

ಚಿತ್ರಪ್ರತಿಮೆಯಂತೆ ನಿಶ್ಚೇಷ್ಟಿತಳಾಗಿ ನಿಂತುಬಿಟ್ಟಳು. ಚೂಡಾಮಣಿಯು ಇಂತಹ ಅವಲಕ್ಷಣ ವ್ಯಕ್ತಿಯನ್ನು ತನಗೆ ಭರ್ತನನ್ನಾಗಿ ಮಾಡುತ್ತಾನೆಂದು ಸ್ವಪ್ನದಲ್ಲೂ ಈಕೆಯು ಭಾವಿಸಿರಲಿಲ್ಲ. ದೈವಸಂಕಲ್ಪವನ್ನು ತಪ್ಪಿಸಲಾರಿಗೂ ಅಸಾಧ್ಯ. ಈತನು ಕುರಿಗಳನ್ನು ಕಾಯುವ ಕುರುಬನೆಂದು ತಿಳಿಯಿತು. ಸಕಲ ವಿದ್ಯಾಪಾರಂತಗನನ್ನು ವರಿಸಬೇಕೆಂದು ಅಪೇಕ್ಷಿಸಿದ ಈ ಇಂದುಮತಿಗೆ ಇಂತಹ ದುರ್ಭರ ಮೂಢನೂ, ಅನಾಗರೀಕನೂ, ಕುರಿಗಳನ್ನು ಕಾಯುವ ಕುರುಬನೂ ಪತಿಯಾಗಬೇಕೆ! "ಹಾ! ಪಿತ, ಹಾ! ಮಾತೆ, ನನಗೋಸ್ಕರ ಬೀಳಬಾರದ ಕಷ್ಟಗಳನ್ನು ಬಿದ್ದು ವಿದ್ಯಾವಂತನಾದ ಅಳಿಯನನ್ನು ಸಂಪಾದಿಸಿಕೊಂಡು ಆನಂದಿಸಬೇಕೆಂದಪೇಕ್ಷೆಸಿದಿರಲ್ಲವೇ? ಸಕಲ ಗುಣಗಣಶೋಭಿತರಾದ ರಾಜಕುಮಾರರನ್ನೊಲ್ಲದೆ, ಈ ಇಂದುಮತಿಯು ಕುರಿ ಕಾಯುವ ಕುರುಬನನ್ನು ಕೈಹಿಡಿದಳೆಂದು ಕೇಳಿದರೆ, ನಿಮ್ಮ ಮನಸ್ಸು ಹೇಗೆ ಪರಿತಪಿಸುವುದೋ? ಅಲ್ಲದೆ ಅವರೆಗೂ ನಾನು ಜೀವಿಸಿರಬೇಕೇ? ರಜ್ಜು-ವಿಷಾಗ್ನಿಗಳು ದೊರೆಯಲಾರವೇ? ದೊರೆತರೇನು? ಆತ್ಮಹತ್ಯೆಯು ಅಂಧತಮಿಸ್ರಾದಿ ನರಕಗಳನ್ನು ದೊರಕಿಸುವುದೆಂದು ಹಿರಿಯರುಹೇಳುವರು ಇನ್ನೇನು ಮಾಡಬೇಕು? ಯಾರ ಸಂಗಡ ಹೇಳಿಕೊಳ್ಳಲಿ?" ಎಂದು ಅನೇಕ ವಿಧವಾಗಿ ಪರಿತಪಿಸಿ ಈತನು ಮೂರ್ಖಾವತಂಸನಾಗಿರುವುದರಲ್ಲಿ ಸಂಶಯವಿಲ್ಲವೆಂದು ನಿಶ್ಚಯಿಸಿಕೊಂಡಳು. "ಆಹಾ! ಚೂಡಾಮಣಿಯು ತನ್ನಭೀಷ್ಟವು ನೆರವೇರದೆ ಹೋದುದರಿಂದ ನನ್ನಮೇಲೆ ಕೋಪಿಸಿಕೊಂಡು, ವಿದ್ಯಾವಂತನನ್ನು, ಗುಣವಂತನನ್ನು, ರೂಪವಂತನಾದ ರಾಜಪುತ್ರನನ್ನು ಲಗ್ನವಾಗುವೆನು ಎಂದು ಪ್ರತಿಜ್ಞೆ ಮಾಡಿದುದಕ್ಕೆ ಪ್ರತಿಕ್ರಿಯೆ ಮಾಡಲು ಇಂತಹ ದಡ್ಡನಾದ, ವಿದ್ಯಾಗಂಧರಹಿತನಾದ ಮೂರ್ಖನನ್ನು ಪತಿಯಾಗಿ ಮಾಡಿ ಕಷ್ಟಪಡಿಸಲೆಳಸಿ ತನಗಿಷ್ಟಬಂದ ಈತನನ್ನು ಮೋಸದಿಂದ ಲಗ್ನಮಾಡಿ ತನ್ನ ಕ್ರೋಧಾಗ್ನಿಯನ್ನು ಆರಿಸಿಕೊಂಡನಲ್ಲವೇ? ಆಗಲಿ, ಈತನನ್ನೇ ವಿದ್ಯಾವಂತನನ್ನೂ, ಕುಲೀನನನ್ನೂ ಮಾಡಿಕೊಂಡರೆ ನನ್ನ ಮನೋರಥವೀಡೇರುವುದು. ಮತ್ತು ನನ್ನ ಕೀರ್ತಿಲತೆಯು ದಿಗಂತವನ್ನಡರುವುದು. ಈತನಿಗೆ ಮೊದಲಿನಿಂದಲೂ ಕ್ರಮವಾಗಿ ವಿದ್ಯಾಭ್ಯಾಸ ಮಾಡಿಸುವುದಸಾಧ್ಯವಾದಕೆಲಸ; ದೇವತಾನುಗ್ರಹ

ದಿಂದಾಗಲಿ, ಮಂತ್ರಪ್ರಭಾವದಿಂದಾಗಲಿ ವಿದ್ವಾಂಸನಾಗುನಂತೆ ಮಾಡುವುದು ಸಾಧ್ಯ" ಎಂದಾಲೋಚಿಸಿ ಆತನಲ್ಲಿ ಹೀಗೆ ಹೇಳಿದಳು.

**ಇಂದುಮತಿ**—ಪ್ರಾಣಪ್ರಿಯಾ, ನೀನು ಯಾವುದಾದರೊಂದು ವಿದ್ಯೆಯನ್ನು ತಿಳಿದಿರುವೆಯ ?

**ವರನು**—ಏನು ? ವಿದ್ದೆಯೇ ?-ಬೀರಪ್ಪನಹಾಡು ಹೇಳುವುದೂ, ದೋಳು ಬಡಿಯುವುದೂ, ಕುರಿ ಕಾಯುವುದೂ, ಕಂಬಳಿ ನೇಯುವುದೂ ಈ ವಿದ್ದೆಗಳು ನನಗೆ ಬರುವುವು

**ಇಂದುಮತಿ**—ಅವೆಲ್ಲವೂ ಉತ್ತಮ ವಿದ್ಯೆಗಳಲ್ಲ. ತರ್ಕ, ವ್ಯಾಕರಣ, ಮೀಮಾಂಸೆ ಮೊದಲಾದ ಶಾಸ್ತ್ರಗಳೇ ಉತ್ತಮ ವಿದ್ಯೆಗಳು. ಅವುಗಳನ್ನು ಕುರಿತು ಕೇಳಿದೆನು,

**ವರನು**—ಅವುಗಳೆಲ್ಲವೂ ನನಗೆ ತಿಳಿಯವು, ನನಗವು ಬೇಡವೂ ಬೇಡ. ನನ್ನ ಕುರಿಗಳು ನನಗಿದ್ದರೆ ಸಾಕು; ನನಗವೇ ಬಂಗಾರ, ನಿನ್ನಂಥ ನೂರಾರು ಜನರನ್ನು ಸಾಕಬಲ್ಲೆನು.

ಇಂದುಮತಿಗೆ ಈತನ ಮೌಢ್ಯವನ್ನು ನೋಡಿದ ಹಾಗೆಲ್ಲಾ ದುಃಖಕ್ಕಿಂತಲೂ ಕೋಪವತಿಶಯವಾಯಿತು. "ಈತನು ಮನುಷ್ಯ ಪ್ರಂಪಚದಲ್ಲಿ ಇರತಕ್ಕವನಾಗಿ ತೋರಲಿಲ್ಲವು; ಇಂತಹ ಮೂರ್ಖನನ್ನು ಭರ್ತನನ್ನಾಗಿ ಮಾಡಿಕೊಳ್ಳುವುದಕ್ಕಿಂತಲೂ ಅವಮಾನವೂ, ದುಃಖವೂ, ಅಪಕೀರ್ತಿಯೂ ಮತ್ತಾವುದಿರುವುದು ?" ಎಂದು ಸ್ವಲ್ಪ ಆಲೋಚಿಸಿ. ತರುವಾಯ ಒಂದು ಖಡ್ಗವನ್ನು ಕೈಗೊಂಡು ಝಳುಪಿಸುತ್ತ—ಅಹೋ ! ಅನಾಗರಿಕ ಶಿಖಾಮಣಿಯೇ, ನಾನೊಂದು ಕೇಳಿದರೆ ನೀನೊಂದು ಹೇಳುವೆಯಾ ? ನಾಗರಿಕತೆಯು ಸ್ವಲ್ಪವಾದರೂ ಇಲ್ಲವು. ನೀನು ನನಗೆ ತಕ್ಕ ಪತಿಯಲ್ಲ. ಆದುದರಿಂದ ಈ ಖಡ್ಗಕ್ಕೆ ಮೊದಲು ನಿನ್ನ ಶಿರವನ್ನು ಬಲಿಕೊಟ್ಟು ತರುವಾಯ ನಾನು ಪ್ರಾಣತ್ಯಾಗ ಮಾಡಿಕೊಳ್ಳುವೆನು" ಎಂದು ಬೆದರಿಸಿದಳು.

ರಾಜಪುತ್ರಿಯ ಕ್ರೋಧಕ್ಕೆ ಭಯಭ್ರಾಂತನಾಗಿ—'ಅಮ್ಮಾ ತಾಯೆ, ನನ್ನನ್ನು ಬಿಟ್ಟುಬಿಟ್ಟರೆ ನಿನ್ನ ಹೆಸರು ಹೇಳಿಕೊಂಡು ಎಲ್ಲಿಯಾದರೂ ಬದುಕಿಕೊಳ್ಳುವೆನು. ನನ್ನ ತಲೆ ಕಡಿದರೆ ನಿನಗೇನು ಲಾಭ ಬರುವುದು? ನನ್ನನ್ನು ಕಾಪಾಡು ಮಂತ್ರಪ್ಪ ಮದುವೆ ಮಾಡುತ್ತೇನೆಂದು ಒಳ್ಳೇ ಮದುವೆ ಮಾಡಿದನು! ಮಾರಮ್ಮನಕೈಲಿ ಕಡಿಸಿಕೊಳ್ಳುವಮದುವೆ! ಅಯ್ಯೋ! ನಮ್ಮಮ್ಮಾ ನನ್ನತಾಯೇ, ಕಡಿಯ ಬೇಡಮ್ಮಾ' ಎಂದು ಕೈಮುಗಿಯುತ್ತ ಘೋರನೆ ಅಳತೊಡಗಿದನು. ಇಂದುಮತಿಗೆ ನಿಜವಾಗಿಯೂ ಆತನನ್ನು ಕಡಿಯಬೇಕೆಂಬ ಉದ್ದೇಶವಿರಲಿಲ್ಲ. ಯಾವ ವಿಧದಿಂದಲಾದರೂ ಅವನನ್ನು ಭಯಭಕ್ತಿಯಿಂದ ವಶಪಡಿಸಿಕೊಂಡು ವಿದ್ಯಾವೈದುಷ್ಯಗಳಿಗೆ ಮಾರ್ಗವನ್ನು ಕಲ್ಪಿಸಿ ಆತನ ಮೇಲನ್ನೇ ಬಯಸಿ, ಆ ರೀತಿ ಮಾಡಿದಳು. ಅವನ ದುಃಖವನ್ನು ನೋಡಿ ಆಕೆಯು ಖಡ್ಗವನ್ನು ಬಿಸುಟು—"ಭಯಪಡಬೇಡ, ದುಃಖಿಸುವಿಯೇಕೆ? ಲೋಕದಲ್ಲಿ ಮೂಢನಾದ ಪತಿಯ ಸಂಗಡ ಸಂಸಾರಮಾಡುವ ಸುಮಂಗಲಿಗಿಂತಲೂ ವಿಧವೆಯೇ ಮೇಲೆಂದು ಎಲ್ಲರೂ ಹೇಳುವರು"

**ವರನು**—ನಾನು ಏಕೆ ಮೂಢನಾದೆನು?

**ಇಂದುಮತಿ**—ನೀನು ಪೂರ್ವಜನ್ಮದಲ್ಲಿ ಸುಕೃತವನ್ನು ಮಾಡಲಿಲ್ಲ. ನಿನಗೆ ತಿಳಿದ ವಿದ್ಯೆಯನ್ನು ಇತರರಿಗೆ ಹೇಳಿದರೆ ಅವರಿಗೆ ಬರುವುದೆಂಬ ಈರ್ಷೆಯಿಂದ ಯಾರಿಗೂ ಹೇಳಿದವನೇ ಅಲ್ಲವಾದುದರಿಂದ ನೀನೀ ಜನ್ಮದಲ್ಲಿ ಮೂಢನಾದೆ.

**ವರನು**—ಆದರೆ ನಾನೀಗ ಏನು ಮಾಡುವುದು?

**ಇಂದುಮತಿ**—ಈಪಟ್ಟಣದ ಉದ್ಯಾನವನದಲ್ಲಿ ಒಂದು ಕಾಳಿಕಾದೇವಾಲಯವಿರುವುದು. ಅದಕ್ಕೆ ಸಮೀಪದಲ್ಲಿ ಒಂದು ಯೋಗೀಶ್ವರಾಶ್ರಮವಿರುವುದು. ಅಲ್ಲಿ ಕಾಳಿಚಂದ್ರನೆಂಬ ಒಬ್ಬ ಯೋಗೀಶ್ವರನು ತಪಸ್ಸು ಮಾಡುತ್ತಿರುವನು. ಆ ಋಷಿಯು ಅಮಿತ ಪ್ರಭಾವಸಮನ್ವಿತನು. ಅವನ ಹತ್ತಿರಕ್ಕೆ ಹೋಗಿ ವಿದ್ಯೆಯು ಬೇಕೆಂದು ಪ್ರಾರ್ಥಿಸು. ಆತನು ನಿನಗೆ ಕಾಳೀಮಂತ್ರವನ್ನು ಉಪದೇಶಿಸುವನು. ಆ ಮಂತ್ರವನ್ನು ತ್ರಿಕರಣ ಶುದ್ಧಿಯಿಂದ ಜಪಿಸಲು ಸಕಲವಿದ್ಯೆಗಳೂ ಕರತಲಾಮಲಕವಾಗುವುವು.

**ವರನು**—ಹಾಗಾದರೆ ಆ ದೇವಾಲಯದ ಮಾರ್ಗವನ್ನು ತೋರಿಸುವೆಯಾ ?

ಹೀಗೆ ವಧೂವರರ ಸಂವಾದದಲ್ಲಿಯೇ ರಾತ್ರಿ ಮೂರು ಜಾವಗಳು ಕಳೆದವು. ರಾಜಪುತ್ರಿಯು ತನ್ನ ಪ್ರಿಯನು ವಿದ್ವಾಂಸನಾಗುವನೆಂದು ಎಷ್ಟೋ ಸಂತೋಷಿಸಿ, ಆತನ ರೂಪಲಾವಣ್ಯಗಳನ್ನು ನೆನೆದು “ ಇಂಥಾ ಸುಂದರನಿಗೆ ವಿದ್ಯೆಯು ಲಭಿಸಿದರೆ ಬಂಗಾರಕ್ಕೆ ಕುಂದನವಿಟ್ಟಂತಾಗುವುದಲ್ಲವೇ?” ಎಂದು ಮೊದಲಾಗಿ ಆಲೋಚಿಸಿದಳು

ಬೆಳಗಾಗುವ ಸಮಯದಲ್ಲಿ ಯಾರಿಗೂ ತಿಳಿಯದಂತೆ ಕಾಳಿಕಾ ದೇವಾಲಯಕ್ಕೆ ಮಾರ್ಗವನ್ನು ತೋರಿಸಿದಳು. ಆತನು ಹೆಂಡತಿಯು ಮಾಡಿದ ಜ್ಞಾನೋಪದೇಶದಿಂದ ಸ್ವಲ್ಪ ತಿಳಿವಳಿಕೆಯುಳ್ಳವನಾಗಿ ಮೆಲ್ಲನೆ ಕಾಳಿಕಾ ದೇವಾಲಯದ ಬಳಿ ಇರುವ ಯೋಗೀಶ್ವರನನ್ನು ಸಂದರ್ಶಿಸಿದ ಮಾತ್ರವೇ ಆತನ ಮನಸ್ಸಿನಲ್ಲಿ ಒಂದು ವಿಧವಾದ ವಿಕಾಸವುಂಟಾಗುತ್ತಿರಲಾಗಿ, ಚಿರಕಾಲ ವವರ ಸಹವಾಸವನ್ನೂ, ಉಪದೇಶವನ್ನೂ ಹೊಂದಿದರೆ, ಇನ್ನೆಷ್ಟು ಜ್ಞಾನ ಉಂಟಾದೀತು ? ಆದುದರಿಂದಲೇ ಸತ್ಸಂಗತ್ವವು ಮೋಕ್ಷದ ದ್ವಾರವೆಂದು ಜ್ಞಾನಿಗಳು ಹೇಳುವರು

ಅಷ್ಟರಲ್ಲಿ ಕಾಳೀಚಂದ್ರನ ಪ್ರಾತಃಕಾಲದ ಕೃತ್ಯಗಳೆಲ್ಲವೂ ಮುಗಿದುವು. ತರುವಾಯ ಈ ಶುಂಠಶಿಖಾಮಣಿಯು ಎರಡು ಕೈಗಳನ್ನು ಮುಗಿದು ಸಾಷ್ಟಾಂಗ ನಮಸ್ಕಾರವನ್ನು ಮಾಡಿ, “ ಸ್ವಾಮಿಾ ನೀನೇ ಗತಿ ” ಎಂದು ಎರಡು ಪಾದಗಳನ್ನೂ ಹಿಡಿದು ಕೊಂಡನು ಕಾಳೀಚಂದ್ರನು ಇವನ ಹಾರಾಟವನ್ನು ನೋಡಿ ಕನಿಕರಿಸಿ ‘ ಅಯ್ಯಾ, ನೀನಾರು ’ ಎಂದು ಕೇಳಿದನು ಇವನಿಗೆ ತನ್ನ ವೃತ್ತಾಂತವೆಲ್ಲವೂ ತಿಳಿಯದೆ ಹಾಗೂ ತನ್ನ ಚರಿತ್ರೆಯನ್ನು ಹೊರಪಡಿಸುವುದಕ್ಕೆ ಮಾತುಗಳು ಬಾರದೆ ಸುಮ್ಮನಿದ್ದನು. ಮತ್ತೆ ಕಾಳೀಚಂದ್ರನು ‘ಅಯ್ಯಾ ನನ್ನ ಹತ್ತಿರಕ್ಕೆ ಏಕೆ ಬಂದೆ? ನಾನು ನಿನಗೆ ಮಾಡಬೇಕಾದ ಕೆಲಸವೇನು ? ಎಂದು ಸಾದರದಿಂದ ಕೇಳಿದನು. ಅವನು ‘ ವಿದ್ಯೆ, ವಿದ್ಯ’ ಎಂದು ಹಲವು ಸಾರಿ ಹೇಳತೊಡಗಿದನು.

ಕಾಳೀಚಂದ್ರನು ಜ್ಞಾನದೃಷ್ಟಿಯಿಂದ ನಡೆದ ವೃತ್ತಾಂತವೆಲ್ಲವನ್ನೂ ಗ್ರಹಿಸಿ ಅವನಲ್ಲಿ ಕನಿಕರಿಸಿ—“ ಅಯ್ಯಾ, ಭಯಪಡಬೇಡ, ನೀನು ದೇವಿಯ ಅನುಗ್ರಹದಿಂದ ಮಹಾ ವಿದ್ವಾಂಸನಾಗುವೆ, ಧೈರ್ಯವಾಗಿರು ” ಎಂದು ಅವ ನನ್ನು ಸಂತೈಸಿ, ಆಗಲೇ ಸ್ನಾನಾದಿ ಕೃತ್ಯಗಳನ್ನು ತೀರಿಸಿಕೊಳ್ಳುವಂತೆಮಾಡಿ ಕಾಳೀಮಂತ್ರವನ್ನು ಸಾಂಗವಾಗಿ ಮೂರುಸಾರಿ ಉಪದೇಶಿಸಿ—“ ಈ ಮಹಾ ಮಂತ್ರವನ್ನು ಏಕಾಗ್ರಚಿತ್ತದಿಂದ ಕಾಳಿಕಾಲಯದ ಬಾಗಿಲಲ್ಲಿ ಮೂರು ದಿನ ಗಳು ರಾತ್ರಿಯೂ ಹಗಲೂ ಜಪವನ್ನು ಮಾಡು, ದೇವಿಯು ನಿನಗೆ ಪ್ರತ್ಯಕ್ಷ ಳಾಗುವಳು ಆಗ ‘ ದೇವೀ ವಿದ್ಯೆಯನ್ನು ಅನುಗ್ರಹಿಸು ’ ಎಂದು ಹೇಳು ” ಎಂದು ಹೇಳಿಕೊಟ್ಟನು

ಆತನು ಹಾಗೆಯೇ ಆಗಲೆಂದು ಕಾಳಿಕಾ ದೇವಾಲಯದ ದ್ವಾರಕ್ಕೆದು ರಾಗಿ ಪದ್ಮಾಸನವನ್ನು ಹಾಕಿಕೊಂಡು ಕುಳಿತು ಮೂಢಭಕ್ತಿಯಿಂದ ಇತರ ಧ್ಯಾನವನ್ನು ಬಿಟ್ಟು ಜಪವನ್ನು ಮಾಡತೊಡಗಿದನು. ಎರಡು ದಿನಗಳು ಕಳೆದುವು, ಮೂರನೆಯದಿನ ಪ್ರಾತಃಕಾಲ ರಾಜಪುತ್ರಿಯು ತನ್ನ ಪ್ರಾಣನಾ ಥನ ವರ್ತನವು ಹೇಗಿರುವುದೋ ನೋಡಬೇಕೆಂದು ತನ್ನ ಸಖಿಯೊಡಗೂಡಿ ಕಾಳಿಕಾ ದೇವಾಲಯಕ್ಕೆ ಬಂದಳು.

ಪತಿಯು ಅತ್ಯುಗ್ರ ತಪಸ್ಸನ್ನು ಮಾಡುತ್ತಿದ್ದನು. ಆತನ ಅಚಂಚಲ ವಾದ ತಪಸ್ಸನ್ನು ನೋಡಿ ಅವಶ್ಯವಾಗಿ ದೇವೀಪ್ರಸಾದವನ್ನು ಹೊಂದುವ ನೆಂದು ಸಂತೋಷಿಸಿದಳು ತರುವಾಯ ಕಾಳೀಚಂದ್ರನ ಆಶ್ರಮವನ್ನು ಪ್ರವೇ ಶಿಸಿ, ಆತನಿಗೆ ನಮಸ್ಕರಿಸಿ “ ಸ್ವಾಮೀ ನನ್ನ ಪ್ರಾಣನಾಥನನ್ನು ಹೇಗೆ ಕೃ ಪಿಡೆವಿರೋ ” ಎಂದು ಪ್ರಾರ್ಥಿಸಿ ಅನುಗ್ರಹವನ್ನು ಹೊಂದಿ ಹೋಗುತ್ತ ಪತಿ ಯು ಕೇಳುವಹಾಗೆ ಒಂದು ಶ್ಲೋಕವನ್ನು ಹೇಳಿದಳು.

ಶ್ಲೋ|| “ ಅನಿಲಸ್ಯಾಗಮೋ ನಾಸ್ತಿ ದ್ವಿಪದೋ ನೈವದೃಶ್ಯತೇ
ಜಲಮಧ್ಯೇ ಸ್ಥಿತಂ ಪದ್ಮಂ ಕಂಪಿತಂ ಕೇನ ಹೇತುನಾ ?”

ಕಂ|| ಉದಯಸಮಯದೊಳು ಗಾಳಿಯು |
ಪದಪಿಂ ಬೀಸದಲೆ ಪಕ್ಕಿಗಳು ಮಾಸಿಸರುಂ ||
ಪದಚಲನಂಗೈಯ್ಯದೆ ಯಾ |
ಪದುಮಂ ಜಲಮಧ್ಯೆ ಕಂಪಿಪುದೆವೇಂಕತವೋ ||

‘ ಪ್ರಾತಃಕಾಲದಲ್ಲಿ ವಾಯುವು ಬೀಸುವುದಿಲ್ಲ, ಪಕ್ಷಿಯಾಗಲಿ ಮನುಷ್ಯನಾಗಲಿ ಕಾಣುವುದಿಲ್ಲ. ಯಾವ ಕಾರಣದಿಂದಲೋ ನೀರಿನಲ್ಲಿನ ತಾಮರಪುಷ್ಪವು ಕದಲುತ್ತಿರುವುದು ’

ಹೀಗೆ ಸಾಭಿಪ್ರಾಯವಾಗಿ ಹೇಳಿದ ಶ್ಲೋಕವು ತನ್ನ ಪ್ರಿಯನ ಕಿವಿಗೆ ಬಿದ್ದಿತು. ರಾಜಕನ್ಯೆಯೂ, ಪ್ರಿಯಸಖಿಯೂ ಮತ್ತೆ ನಾಳೆ ಬರೋಣವೆಂದು ನಿಜಗೃಹಕ್ಕೆ ತೆರಳಿದರು. ಇತ್ತಲೀ ವರನು ತಪವನ್ನು ಮಾಡಿಮಾಡಿ ಬಳಲಿ ಹೋದನು. ರಾತ್ರಿ ಜಾಮ ಕಳೆದುಹೋಯಿತು, ಚಂದ್ರೋದಯವಾಯಿತು. ಕುಮುದಗಳೊಡನೆಯೇ ಈತನ ಬುದ್ಧಿ ವಿಕಸಿತವಾಯಿತು. ವಿದ್ಯೆಗಳೆಲ್ಲಾ ಸ್ವಪ್ನದಲ್ಲಿ ಸಮುದ್ರ ತರಂಗಗಳಹಾಗೆ ಹೊರಳಿಹೊರಳಿ ಬಂದಂತೆ ತೋರುತ್ತಿದ್ದವು. ಕಾಳಿಕಾದೇವಿ ಇನ್ನೂ ಪ್ರತ್ಯಕ್ಷಳಾಗಲಿಲ್ಲ.

ಈ ದೇವಿಯು ಆ ನಗರಕ್ಕೆ ಪ್ರಧಾನದೇವತೆಯಾದುದರಿಂದ ರಾತ್ರಿಯೆಲ್ಲ ಘೋರಾಕಾರವನ್ನು ತಾಳಿ ತ್ರಿಶೂಲಧಾರಿಣಿಯಾಗಿ ಪಟ್ಟಣವೆಲ್ಲವನ್ನೂ ಸಂಚರಿಸಿ ಯಾವ ಉಪದ್ರವಗಳೂ ಬಾರದಂತೆ ಕಾಪಾಡುತ್ತ ಬೆಳಗಾಗುವುದರೊಳಗಾಗಿ ತನ್ನ ಆಲಯಕ್ಕೆ ಪ್ರವೇಶಿಸುತ್ತಿದ್ದಳು. ಈ ಸಮಾಚಾರವನ್ನು ಆತನು ತಿಳಿದು ಕಾಳಿಕಾದೇವಿಯು ಈಗ ಹೊರಗೆ ಹೊರಟಿರುವಳೆಂದೂಹಿಸಿ, ಆ ದೇವಾಲಯದೊಳಪೊಕ್ಕು ಬಾಗಿಲುಗಳನ್ನು ಭದ್ರವಾಗಿ ಮುಚ್ಚಿ ಒಳಗೆ ಕುಳಿತುಕೊಂಡು ಪುನಃ ಮಂತ್ರಜಪ ಮಾಡಲಾರಂಭಿಸಿದನು.

ಬೆಳಗಾಯಿತು. ಯಥಾಪ್ರಕಾರವಾಗಿ ದೇವಿಯು ಆಲಯಕ್ಕೈತಂದು ನೋಡಲು ಬಾಗಿಲುಗಳೆರಡು ಮುಚ್ಚಲ್ಪಟ್ಟಿದ್ದವು. ಬೇಗ ಬಂದು ಎರಡು ಬಾಗಿಲುಗಳನ್ನು ಕಾಲಿನಿಂದ ದೂಡಿದಳು. ತೆರೆಯದಿರುವುದನ್ನು ನೋಡಿ ಒಳಗೆ ಯಾರೋ ಪ್ರವೇಶಿಸಿರುವರೆಂದು ‘ ಆಹಾ ! ಈ ದುರ್ಮಾರ್ಗಿಯು ಯಾರಿರಬಹುದು ? ಅಖಿಲ ಲೋಕ ಭಯಂಕರಿಯಾದ ಈ ಕಾಳಿಗೆ ಅಪಕೃತಿಯಾಚರಿಸಿ ಬದುಕುವನಾನು ? ಸಿಂಹದ ಸಂಗಡ ಸರಸವಾಡುವ ಮೂರ್ಖನುಂಟೇ ? ” ಎಂದು ಭೀಕರವಾಗಿ ಗದರಿಸಿದಳು.

ಅವನು ಒಳಗೆ ಕುಳಿತು ‘ ವಿದ್ಯಾವಿದ್ಯಾ’ ಎಂದು ಗೊಣಗುಟ್ಟುತ್ತಿದ್ದನು.

ಈ ಎರಡಕ್ಷರಗಳನ್ನು ಕಾಳಿಕಾದೇವಿಯು ಕೇಳಿ ದಿವ್ಯದೃಷ್ಟಿಯಿಂದ ಸಕಲ ವಿಷಯಗಳನ್ನೂ ತಿಳಿದಳು "ಎಲವೋ ಬಾಗಿಲುಗಳನ್ನು ತೆರೆ, ನಿನ್ನಭೀಷ್ಟವನ್ನು ನೆರವೇರಿಸುವೆನು" ಎಂದಳು. ಆದರೂ ಆ ಶುಂಠಶಿಖಾಮಣಿಯು ಒಂದೇ ಪಟ್ಟಿನಿಂದ 'ವಿದ್ಯಾ' ಎನ್ನುತ್ತ ಬಾಗಿಲುಗಳನ್ನು ತೆರೆಯದೇ ಇದ್ದನು.

ಕಾಳಿಯು ಗದರಿಸಿ ಬೆದರಿಸಿ ನೋಡಿ ಪ್ರಯೋಜನವಿಲ್ಲವಾಯಿತು ಅವನ ಮೂರ್ಖತೆಗೆ ಮರುಕಹುಟ್ಟಿ "ಎಲೋ ಬಾಗಿಲು ಕಂಡಿಯಲ್ಲಿ ನಾಲಗೆಯನ್ನು ನೀಡು" ಎಂದಾಜ್ಞಾಪಿಸಿದಳು. ಅವನು ಹಾಗೆಯೇ ಮಾಡಲು ನಾಲಗೆಯಮೇಲೆ ಐದು ಬೀಜಾಕ್ಷರಗಳನ್ನು ಬರೆದಳು. ಆಗಲಾತನ ಸ್ಥಿತಿಯನ್ನು ಏನೆಂದು ಬಣ್ಣಿಸಲಾದೀತು! ನಾವಿದುವರಿಗೆ ದಡ್ಡನೆಂದೂ, ಮಡ್ಡಿಯೆಂದೂ ಆಡಿದ ಕುರುಬನಲ್ಲ, ಆ ಜನ್ಮವಲ್ಲ, ಆ ತಿಳಿವಲ್ಲ, ಆ ತೇಜಸ್ಸಲ್ಲ, ಇದೊಂದು ಚಾತುರ್ಯ. ನೂರೇಕೆ? ಆ ಮಾನವನೇ ಅಲ್ಲ, ಈತನು "ಕವಿರತ್ನ ಕಾಳಿದಾಸ" ಮಹಾ ವಿದ್ವಾಂಸನು. ಈತನ ಬುದ್ಧಿಚಾತುರ್ಯವನ್ನು ಸಹಸ್ರ ಮುಖವಾಗಿ ಹೊಗಳಿದರೂ ತೀರದು, ಎರಡನೆಯ ಕಾಳಿಯೆ ಎಂಬಂತಿದ್ದನು.

ತದನಂತರ ದೇವಾಲಯದ ಬಾಗಿಲುಗಳು ತೆರೆಯಲ್ಪಟ್ಟವು. ಸಂಗಡಲೇ ತ್ರಿಶೂಲಧಾರಿಣಿಯೂ, ಭೀಷಣಾಕಾರೆಯೂ ಆಗಿ ಸಾಕ್ಷಾತ್ಕರಿಸಿದ ಕಾಳಿಕಾ ದೇವಿಯನ್ನು ಸ್ತೋತ್ರಮಾಡಿದನು. ಗಂಗಾ ಪ್ರವಾಹ ತರಂಗಗಳಂತೆ ಉಕ್ಕುತ್ತಿರುವ ಕಾಳಿದಾಸನ ಕವಿತಾಧಾರೆಯು ಹೊರಸೂಸಿತು. ಕಾಳಿಯು ಆತನ ಸ್ತುತಿಗೆ ಸಂತೋಷಿಸಿ, ಅಪೇಕ್ಷಿಸಿದಾಗೆಲ್ಲಾ ಪ್ರತ್ಯಕ್ಷವಾಗುವೆನೆಂದು ವರಪ್ರದಾನಮಾಡಿದಳು.

ಇಷ್ಟರಲ್ಲಿ ಕಾಳಿದಾಸನ ವಿದ್ಯಾ ವೈದುಷ್ಯವನ್ನು ನೋಡಲೈತರುವನೋ ಎಂಬಂತೆ ಸೂರ್ಯನುದಯಿಸಿ ಬರುತ್ತಿದ್ದನು. ಆಗ ರಾಜಕನ್ಯೆಯು ಬಂದು ಕಾಳೀಚಂದ್ರಯೋಗಿಯ ಮೂಲಕ ವೃತ್ತಾಂತವನ್ನೆಲ್ಲ ತಿಳಿದು, ಪರಮಾನಂದ ಭರಿತಳಾಗಿ ಕಾಳಿದಾಸನ ದರ್ಶನೋತ್ಸಾಹಿನಿಯಾಗಿ ನೀರಿಕ್ಷಿಸುತ್ತಿದ್ದಳು. ಕಾಳಿದಾಸನಿಗೆ ರಾಜಪುತ್ರಿಯನ್ನು ನೋಡಿದ ಮಾತ್ರವೇ ಹಿಂದಿನ ದಿನ ಆಕೆಯು

ತನ್ನ ಸಖಿಯೊಡಗೂಡಿ ಹೇಳಿದ ಶ್ಲೋಕವು ಸ್ಮರಣೆಗೆ ಬರಲು ಅದಕ್ಕುತ್ತರ ವಾಗಿ ಆ ಮಾನಿನಿಯು ಕೇಳುವಹಾಗೆ ಈ ಶ್ಲೋಕವನ್ನು ಹೇಳಿದನು.

ಶ್ಲೋ॥ "ಪಾವಕೋಚ್ಛಿಷ್ಟ ವರ್ಣಸ್ಯ ಶರ್ವರ್ಯಾ ಬಂಧನಂ ಕೃತಂ।
ಮೋಕ್ಷಂ ನಲಭತೇ ಕಾಂತೇ: ಕಂಪಿತಂ ತೇನಹೇತುನಾ"

ಕಂ॥ ತುಂಬಿಯು ತಂಬೆಲರಿಂಟುವು।
ದಂ ಬಿಡುತಂ ಬಂದಿಯಾಗಿ ಮುಂಬರಿಯಲ್ಕಾ॥
ಕಂಬಿಗಳಂ ಬಡಿವುದರಿಂ।
ಬಿಂಬಾಧರೆ ಕಂಪಿಸುತ್ತಲಿರ್ಪುದು ಕಮಲಂ॥

"ರಾತ್ರಿ ಧೂಮದಂತಹ ಕಾಂತಿಯುಳ್ಳದನ್ನು (ದುಂಬಿಯನ್ನು) ಬಂದೀಖಾನೆಯಲ್ಲಿ ಹಾಕಿದ್ದು, ಇನ್ನೂ ಬಿಡಿಸಲಿಲ್ಲವಾದುದರಿಂದ ಕಮಲವು ಕದಲುತ್ತಿರುವುದು."

ಈ ಸಮಾಧಾನವನ್ನು ಕೇಳಿ ರಾಜಪುತ್ರಿಯು-"ಆಹಾ! ನಾನು ಕೇಳಿದ ಪ್ರಶ್ನೆಗೆ ಇದುವರೆಗೂ ಯಾರೂ ಸಮಾಧಾನವನ್ನು ಹೇಳಲಿಲ್ಲ. ನನ್ನ ಪ್ರಾಣ ನಾಯಕನು ಸ್ವಲ್ಪವಾದರೂ ಭಾವರಸವು ಕೆಡದಂತೆ ನನ್ನ ಮನೋಗತವಾದ ಅಭಿಪ್ರಾಯವನ್ನು ಹೊರಪಡಿಸಿದನು. ತತ್ಪೂರ್ವ ಎಷ್ಟು ಮೂಢನಾಗಿದ್ದನೋ, ವಿಪರೀತವಾಗಿ ಅಷ್ಟೂ ವಿದ್ವಾಂಸನಾದನು. ಇಷ್ಟಕ್ಕೂ ನನ್ನ ಪೂರ್ವಪುಣ್ಯವು ಚೆನ್ನಾಗಿರುವುದು" ಎಂದು ಸಂತೋಷಾಶ್ಚರ್ಯ ಮಗ್ನಳಾಗಿ ಅತಿಶಯ ಭಕ್ತಿ ವಿನಯಗಳಿಂದ ಕಾಳಿದಾಸನನ್ನು ಸಮೀಪಿಸಿ, ನಮಸ್ಕಾರಮಾಡಿ, "ನಾಥಾ, ನಿನ್ನ ಬಳಿಯಲ್ಲಿ ನಾನು ಮಾಡಿದ ಅಪರಾಧ ಸಹಸ್ರಗಳನ್ನೂ ಕ್ಷಮಿಸಬೇಕಾಗಿ ಬೇಡುತ್ತೇನೆ. ನನ್ನ ಮನೋರಥವು ನೆರವೇರುವಂತೆ ತಮಗಿಂತಹ ವಿದ್ಯಾ ವೈದುಷ್ಯಗಳನ್ನು ಕೃಪೆ ಮಾಡಿದ ಈ ಕಾಳಿಕಾದೇವಿಗೆ ಸಹಸ್ರ ವಂದನೆಗಳನ್ನು ಮಾಡುತ್ತೇನೆ. ಇನ್ನು ಪ್ರಿಯಳಾದ ನನ್ನನ್ನು ಅನುಗ್ರಹಿಸಬೇಕಾಗಿ ಬೇಡು ತ್ತೇನೆ" ಎಂದು ಸಾಭಿಪ್ರಾಯವಾಗಿ ನುಡಿದಳು. ಕಾಳಿದಾಸನು ರಾಜಪುತ್ರಿ ಯ ಮಾತನ್ನು ಕೇಳಿ—"ಅಹೋ! ರಾಜಪುತ್ರೀ, ನೀನು ನನಗೇನೂ ಅಪ ಕಾರ ಮಾಡಿದವಳಲ್ಲ, ಅಮಿತವಾದ ಉಪಕಾರವನ್ನು ಮಾಡಿ ನನ್ನ ಕೃತಜ್ಞ ತೆಗೆ ಪಾತ್ರಳಾಗಿರುವೆ, ನಿನ್ನ ಋಣವನ್ನು ತೀರಿಸಿಕೊಳ್ಳಲು ಈ ಜನ್ಮದಂತಹ ನೂರು ಜನ್ಮಗಳಾದರೂ ಸಾಲವು. ಕೇವಲ ಮೂಢದೆಸೆಯಲ್ಲಿದ್ದ ನನ್ನನ್ನು

ಅನುಗ್ರಹಿಸಲು ಮನಸ್ಸುಮಾಡಿ, ಕಾಳೀಚಂದ್ರರ ಸಂದರ್ಶನ ಮಾಡಿಸಿದೆ; ಅವರ ಮಂತ್ರಪ್ರಭಾವದಿಂದ ಕಾಳಿಕಾದೇವಿಯ ದರ್ಶನವು ಲಭಿಸುವಂತೆ ಮಾಡಿದೆ. ಆದುದರಿಂದ ನೀನೇ ನನಗೆ ಪ್ರಥಮ ಗುರುಸ್ಥಾನವು. ಈ ಉಪಕಾರಕ್ಕೆ ಪ್ರತ್ಯುಪಕಾರವೇನನ್ನು ಮಾಡಲಿ? ಪೂರ್ವದಲ್ಲಿ ನಮಗಿದ್ದ ಭಾರ್ಯಾಭರ್ತರ ಭಾವವು ಇಂದಿಗೆ ಮೂರು ದಿನಗಳ ಹಿಂದೆಯೇ ನಶಿಸಿಹೋಯಿತು. ಇನ್ನು ಮುಂದೆ ಗುರುಶಿಷ್ಯಭಾವವೇ ನನ್ನ ಅಭಿಮತವಾಗಿರುವುದು. ಪ್ರಯುಕ್ತ ನನ್ನನ್ನು ಅನುಗ್ರಹಿಸು; 'ಶಿಷ್ಯನೇ' ಎಂದು ಸಂಭೋದಿಸು; ನಿನಗಿದೋ ನಮಸ್ಕಾರ" ಎಂದು ಆಕೆಗೆ ಪ್ರದಕ್ಷಿಣೆಮಾಡಿ ನಮಸ್ಕರಮಾಡಿದನು.

ರಾಜಪುತ್ರಿಯು ಬೆರಗಾದಳು. "ಅಯ್ಯೋ! ತಾನೊಂದು ಯೋಚಿಸಿದರೆ ದೈವವೊಂದು ಬಗೆದುದಲ್ಲ, ಇಂತಹ ರೂಪವಂತನನ್ನು ವಿದ್ಯಾವಿನಯಸಂಪನ್ನನನ್ನಾಗಿ ಮಾಡಿ ಆತನಲ್ಲಿ ಸುಖಿಸಬೇಕೆಂದು ಬಗೆದರೆ ನನ್ನ ಮನೋರಥಗಳೆಲ್ಲವೂ ವ್ಯರ್ಥವಾದುವಲ್ಲ" ಎಂದು ಇಂದುಮತಿ ಹೃದಯವು ಪರಿತಪಿಸುತ್ತಿದ್ದಿತು. ಅನೇಕ ವಿಧವಾಗಿ ತನ್ನ ಅನುರಾಗವನ್ನು ಪ್ರಕಟಿಸಿ, ಕಾಳಿದಾಸನ ಮನಸ್ಸನ್ನು ಮಾರ್ಪಡಿಸಲು ಯತ್ನಿಸಿದಳು. ಆದರೆ ಸಾಧ್ಯವಾಗಲಿಲ್ಲ.

ಕಾಳಿದಾಸನ ಅಸಮಾನ ಸೌಂದರ್ಯವು ರಾಜಪುತ್ರಿಯ ಹೃದಯವನ್ನು ಆಕರ್ಷಿಸತೇ ಹೊರತು, ಆಕೆಯ ಸೌಂದರ್ಯವು ಕಾಳಿದಾಸನ ಹೃದಯವನ್ನು ಆಕರ್ಷಿಸಲಿಲ್ಲ. ನಿಜವಾಗಿಯೂ ಇಂದ್ರಿಯಗ್ರಾಮಗಳನ್ನು ಸ್ವಾಧೀನಪಡಿಸಿಕೊಂಡ ಮಹಾನುಭಾವರೇಕೆ ಚಲಿಸುವರು? ಇಂದುಮತಿಯು ಹಲವು ಬಗೆಯಾಗಿ ಪ್ರಾರ್ಥಿಸಿದಳು. ಕಾಳಿದಾಸನು ಭಾರ್ಯಾಬುದ್ಧಿಯು ಮಹಾಪಾತಕವೆಂದು ಬಗೆದನು. ತರುವಾಯ ನಿರಾಶಳಾಗಿ ರಾಜಪುತ್ರಿಯು ಘೋರನೆ ಅಳತೊಡಗಿದಳು. ಕಾಳಿದಾಸನ ಮನಸ್ಸು ಧರ್ಮಸಹಿತವೇ ಹೊರತು, ದಯಾಸಹಿತವಾಗಲಿಲ್ಲ. ಇಂದುಮತಿಯು ಅತ್ಯಂತ ಕೋಪಿಷ್ಟಳಾಗಿ ಏನು ಮಾಡಲೂ ತೋಚದೆ, ಪ್ರಾರ್ಥಿಸಿ ಪ್ರಾರ್ಥಿಸಿ, ಕಣ್ಣೀರು ಕಾಲುವೆಗಳಾಗಿ ಪ್ರವಹಿಸಲು "ಕಾಳಿದಾಸಾ, ನೀನು ಕಠಿಣಹೃದಯನಾಗಿ ನನ್ನ ಪ್ರಾರ್ಥನೆಯನ್ನು ಅಂಗೀಕರಿಸದೆ ನನ್ನ ಜನ್ಮವನ್ನು ವ್ಯರ್ಥಮಾಡಿದೆ. ಹೀಗೆಯೇ ನನ್ನ ಜನ್ಮವನ್ನು ಕಡೆಹಾಯಿಸಬೇಕಾಗಿರುವುದು. ನಿರಪರಾಧಿನಿಯಾದ ಸ್ತ್ರೀಯನ್ನು ಹೀಗೆ

ಕಷ್ಟಪಡಿಸಿ, ನಿಟ್ಟುಸಿರಿಡಿಸಿದೆಯಾದುದರಿಂದ ನೀನು ಸ್ತ್ರೀಯಿಂದಲೇ ಕೊನೆಗೆ ಮೃತನಾಗು" ಎಂದು ಶಪಿಸಿ, ಆತನ ರೂಪಲಾವಣ್ಯಗಳನ್ನೇ ಸ್ಮರಿಸುತ್ತ, ಅಂತಃಪುರವನ್ನು ಸೇರಿ, ಆ ಜನ್ಮಾವಧಿ ಬ್ರಹ್ಮಚಾರಿಣಿಯಾಗಿ ಕಾಲವನ್ನು ಕಳೆದಳು.

ತದನಂತರ ಕಾಳಿದಾಸನು ರಾಜಪುತ್ರಿಯಿಂದ ಶಾಪವನ್ನು ಹೊಂದಿ ಗುರುಭಾವದಿಂದ ಪ್ರತಿಶಾಪವನ್ನು ಕೊಡದೆ, ಕಾಳೀಚಂದ್ರನಿಗೂ, ಕಾಳಿಕಾ ದೇವಿಗೂ ನಮಸ್ಕರಿಸಿ ಅನುಜ್ಞೆಯನ್ನು ಪಡೆದು ಪ್ರಯಾಣಮಾಡಿದನು. ತರುವಾಯ ಕೆಲವು ದಿನಗಳಿಗೆ ಭೋಜರಾಜನ ಕೀರ್ತಿಯನ್ನು ಕೇಳಿ, ಆತನ ರಾಜಧಾನಿಯಾದ ಧಾರಾನಗರಕ್ಕೈತಂದನು.



## ಗೋವಿಂದ ಪಂಡಿತ.

ಒಂದು ದಿನ ಭೋಜರಾಜನು ಪ್ರಾತಃಕಾಲ ಬಿಳಿಯ ಕುದುರೆಯನ್ನು ಹತ್ತಿಕೊಂಡು ಬುದ್ಧಿನಾಗರಸೊಡಗೂಡಿ, ಕ್ರೀಡೋದ್ಯಾನಕ್ಕೆ ಗಮಿಸುತ್ತಿದ್ದನು. ಮಾರ್ಗಮಧ್ಯದಲ್ಲಿ ಗೋವಿಂದಪಂಡಿತನೆಂಬ ಒಬ್ಬ ಬ್ರಾಹ್ಮಣನು ಇದಿರಾಗಿ, ಭೋಜರಾಜನನ್ನು ನೋಡಿ ಆಶೀರ್ವದಿಸದೆ ಹೋಗುತ್ತಿದ್ದನು.

ಭೋಜರಾಜನು ಇದರ ಕಾರಣವನ್ನು ತಿಳಿಯದೆ ಆ ಬ್ರಾಹ್ಮಣನನ್ನು ಕುರಿತು—"ಅಹೋ! ವಿಪ್ರೋತ್ತಮಾ, ಮಹಾರಾಜನಾದ ನನ್ನನ್ನು ಪ್ರಾತಃಕಾಲದಲ್ಲಿ ಕಂಡು, ಆಶೀರ್ವದಿಸದೆ ಕಣ್ಣುಗಳನ್ನು ಮುಚ್ಚಿಕೊಂಡು ಹೋಗುವೆ ಏಕೆ? ನಾನು ನಿನಗೇನು ಅಪಕಾರಮಾಡಿದೆನು" ಎಂದು ಕೇಳಿದನು.

ಗೋವಿಂದಪಂಡಿತನು "ರಾಜಾ, ನೀನು ವಿಷ್ಣುಭಕ್ತನು, ಬ್ರಾಹ್ಮಣ ಗೇನೂ ಅಪಕಾರಮಾಡುವವನಲ್ಲ ಆದಕಾರಣ ನಿನ್ನಿಂದ ನನಗೆ ಭಯವಿಲ್ಲವು. ಆದರೂ ನೀನು ಒಬ್ಬ ಬ್ರಾಹ್ಮಣನಿಗಾಗಲಿ, ವಿದ್ವಾಂಸನಿಗಾಗಲಿ ಒಂದು

ಕಾಸನ್ನಾದರೂ ಕೊಡುವವನಲ್ಲ. ಆದುದರಿಂದ ನಿನ್ನ ದಾಕ್ಷಿಣ್ಯವು ನನ ಗೇನು? ಆಶೀರ್ವಾದ ಮಾಡಿದುದರಿಂದ ನನಗೇನು ಲಾಭವಿರುವುದು? ಇಷ್ಟೇ ಅಲ್ಲದೆ ಪ್ರಾತಃಕಾಲದಲ್ಲಿ ಲೋಭಿಯ ಮುಖವನ್ನು ನೋಡಿದರೆ ಇದ್ದ ಸಂಪತ್ತು ನಾಶವಾಗುವುದೆಂದು ಹೇಳಿರುವರು ಮತ್ತು ದಾನರಹಿತನಾದ ರಾಜನನ್ನೂ, ನಪುಂಸಕನನ್ನೂ ಪಂಡಿತನೂ ಪ್ರಜೆಯೂ ಪ್ರೇಮಿಸುವುದಿಲ್ಲ ಲೋಭಿಗೆ ಕೋಪವುಂಟಾದರೇನು, ಅನುಗ್ರಹವುಂಟಾದರೇನು? ಇವನಿಂದ ಯಾರಿಗೇನು ಪ್ರಯೋಜನವಿರುವುದು? ಲೋಕದಲ್ಲಿ ಚಾತುರ್ಯವಿಲ್ಲದವನ ವಿದ್ಯೆ, ಲೋಭಿಯ ಸಂಪತ್ತು, ಭಯಗ್ರಸ್ತನ ಭುಜಬಲ ಇವು ನಿರರ್ಥಕವಾದುವು ನನ್ನ ತಂದೆಯು ಗತಿಸುವಾಗ—'ಮಗನೇ ನಿನಗೆಷ್ಟು ಪ್ರಿಯವಾದರೂ ಗಾಯಕ ರಿಗೂ, ಸ್ತ್ರೀಯರಿಗೂ, ದ್ಯೂತಗಾರರಿಗೂ ವಶವರ್ತಿಯಾದ ಲೋಭಿರಾಜನನ್ನು ಮಾತ್ರ ಕನಸಿನಲ್ಲಾದರೂ ಸ್ಮರಿಸಬೇಡ. ಮಹಾ ಪಾತಕಗಳಲ್ಲೆಲ್ಲ ಎರಡು ದೊಡ್ಡ ಪಾತಕಗಳು: ಮೊದಲನೆಯದು ಲೋಭಿಯ ದರ್ಶನ, ಎರಡನೆಯದು ಅವನನ್ನಾಶ್ರಯಿಸುವುದು. ಅದುದರಿಂದ ರಾಜನು ವಿವೇಕವಿಲ್ಲವೆ, ಧರ್ಮ ವನ್ನು ಬೋಧಿಸುವ ಮಂತ್ರಿಗಳ ಮಾತನ್ನು ಕೇಳದೆ, ವಿದ್ವಾಂಸರನ್ನಾದರಿಸದಿ ದ್ದರೆ ಅವನನ್ನು ಸತ್ಪುರುಷರು ಏಕೆ ಕೊಂಡಾಡುವರು? ರಾಜನು ಗುಣವಂತ ನಾದರೆ ಆತನನ್ನು ಆಶ್ರಯಿಸಿ, ಜೀವಿಸಿರುವಷ್ಟು ಕಾಲ ಸೇವಿಸಬೇಕು. ಆ ಸೇವೆಯಿಂದ ತತ್‌ಕ್ಷಣ ಫಲ ದೊರೆಯದಿದ್ದರೂ ಕಾಲಾನಂತರದಲ್ಲಾದರೂ ಫಲವುಂಟಾಗದೆ ಹೋಗುವುದಿಲ್ಲ' ಎಂದು ಬೋಧಿಸಿದನು ಆದುದರಿಂದತನ್ನ ತಂದೆಯ ಉಪದೇಶದಂತೆ ಕಣ್ಣುಗಳನ್ನು ಮುಚ್ಚಿಕೊಂಡು ಹೋಗುತ್ತಿದ್ದೆನು" ಎಂದನು.

ಭೋಜರಾಜನಿಗೆ ಬಹಳ ಅವಮಾನವುಂಟಾಯಿತು. ಆದರೂ ಬುದ್ಧಿ ಶಾಲಿಯಾದುದರಿಂದ ಅವನ್ನೂ ಹಿತವಾಕ್ಯಗಳಂತೆಯೇ ಭಾವಿಸಿ ಆ ಬ್ರಾಹ್ಮಣ ನನ್ನು ಕುರಿತು ಹಿಗೇ ಹೇಳಿದನು—"ಅಹೋ! ವಿಪ್ರವರ್ಯಾ, ಲೋಕದಲ್ಲಿ ಹಿತವಾಗಿ ಮಾತಾಡುವವರೆಷ್ಟೋ ಜನಗಳು ಸಾಮಾನ್ಯವಾಗಿ ದೊರಕುವರು. ಆದರೆ ಪ್ರಕೃತ ಕಾಲದಲ್ಲಿ ಹಿತವಾಗಿ ಕಾಣದಿದ್ದರೂ ಉತ್ತರೋತ್ತರ ಹಿತಕರ ವಾದ ಮಾತನ್ನು ದಾಕ್ಷಿಣ್ಯವಿಲ್ಲದೆ ನುಡಿಯುವವರೂ, ಆ ಮಾತುಗಳನ್ನು

ಕೇಳುವವರೂ ಲಭಿಸುವುದು ಬಹಳ ದುರ್ಲಭ. ರುಚ್ಯವೂ, ಗುಣಯುತವೂ ಆದ ಔಷಧವು ಸಾಮಾನ್ಯವಾಗಿ ದೊರೆಯಲಾರದಲ್ಲವೇ ?

ರಾಜನು ಗೋವಿಂದ ಪಂಡಿತನಲ್ಲಿ ಹೀಗೆ ಸಂಭಾಷಿಸಿ—" ಪಂಡಿತನೇ ನಿನ್ನ ಹೆಸರೇನು " ಎಂದು ಕೇಳಿದನು. ಆ ಬ್ರಾಹ್ಮಣನು ತನ್ನ ಹೆಸರನ್ನು ತಾನು ಹೇಳಿಕೊಳ್ಳುವುದು ಸರಿಯಲ್ಲವೆಂದು ಭೂಮಿಯಮೇಲೆ 'ಗೋವಿಂದನು' ಎಂದು ಬರೆದು ತೋರಿಸಿದನು. ಇದನ್ನು ನೋಡಿ ರಾಜೇಂದ್ರನು ' ಆಹಾ ! ಈ ಬ್ರಾಹ್ಮಣನು ದೊಡ್ಡ ವಿದ್ವಾಂಸನು ' ಎಂದು ಒಂದು ಲಕ್ಷರೂಪಾಯಿಗಳನ್ನು ಕೊಡುವಂತೆ ಕೋಶಾಧ್ಯಕ್ಷನಿಗೆ ಉತ್ತರವನ್ನು ಬರೆದುಕೊಟ್ಟು, ಪ್ರತಿದಿನವೂ ತನ್ನಾಸ್ಥಾನಕ್ಕೆ ಬರಬೇಕೆಂದೂ, ಯಾರೇ ಆಗಲಿ ದೊಡ್ಡವಿದ್ವಾಂಸರೂ ಕವಿಗಳೂ ಬಂದರೆ ಸಭೆಗೆ ಕರೆದುಕೊಂಡು ಬರಬೇಕೆಂದೂ ಹೇಳಿ ಆ ಪಂಡಿತನನ್ನು ಕಳುಹಿಸಿಕೊಟ್ಟನು. ಹೀಗೆ ಕೆಲವುಕಾಲ ಕಳೆಯಲಾಗಿ ಅನೇಕ ದೇಶಗಳಿಂದ ಕವಿಗಳೂ, ಶಾಸ್ತ್ರಜ್ಞರೂ ಭೋಜರಾಜನ ದರ್ಶನಕ್ಕಾಗಿ ಬರುತ್ತಿದ್ದರು. ಅವರಿಗೆಲ್ಲ ಬೇಕಾದಷ್ಟು ಧನವನ್ನು ಕೊಟ್ಟು ಕಳುಹಿಸುತ್ತಿದ್ದನು. ಧನಾಗಾರದಲ್ಲಿ ದ್ರವ್ಯವು ಬಹಳ ಕಡಿಮೆಯಾಗುತ್ತಾ ಬಂದಿತು. ಇದನ್ನರಿತು ಬಬ್ಬು ಮಂತ್ರಿಯು ಹೀಗೆ ನುಡಿದನು—" ಮಹಾಪ್ರಭೋ ! ಲೋಕದಲ್ಲಿ ರಾಜರು ಕೋಶಬಲ ಉಂಟಾಗಿದ್ದರೇನೆ ಜಯವಂತರಾಗುವರು. ಯಾರಿಗೆ ಆನೆಗಳು, ಕುದುರೆಗಳು, ಬೊಕ್ಕಸ-ಮುಂತಾದ ಸಂಪದಗಳಭಿವೃದ್ಧಿಯು ಉಂಟಾಗಿರುವುದೋ, ಅವನೇ ಜಯಶಾಲಿ, ಅವನನ್ನು ಶತ್ರುಗಳು ಎದುರಿಸಲಾರರು. ಆದುದರಿಂದ ಕೋಶಬಲವನ್ನು ಮುಖ್ಯವಾಗಿ ಕಾಪಾಡಿಕೊಳ್ಳಬೇಕು. ಅಧಿಕ ವ್ಯಯಮಾಡಿದರೆ ದಾರಿದ್ರ್ಯವು ಸಂಭವಿಸುವುದು. ತದನಂತರ ದರಿದ್ರನೇನು ಕೆಲಸಮಾಡುವನು?" ಹೀಗೆ ದಾನಮಾಡಕೂಡದೆಂದು ಆ ಲೋಭಿಮಂತ್ರಿಯು ಬೋಧಿಸಲು ಉದ್ಯುಕ್ತನಾದನು. ಭೋಜನು ಗದ್ದರಿಸಿ ' ನಿನ್ನಂತಹ ಲೋಭಿಯು ಆಸ್ಥಾನದಲ್ಲಿ ಇರಲಾಗದು ' ಎಂದು ಅವನನ್ನು ತೊಲಗಿಸಿ ಅವನ ಸ್ಥಳದಲ್ಲಿ ಮತ್ತೊಬ್ಬನನ್ನು ನಿಯಮಿಸಿದನು.



# ಗೊಲ್ಲರ ಹುಡುಗಿ.

ಒಂದು ದಿನ ಭೋಜರಾಜನು ಬೇಟೆಯಾಡುತ್ತಾ ಒಂದಾನೊಂದು ಅರಣ್ಯ ಮಧ್ಯದಲ್ಲಿ ಬಹಳ ದೂರಪ್ರಯಾಣಮಾಡಿ, ಮಧ್ಯಾಹ್ನ ಕಾಲವಾದುದರಿಂದ ತೀಕ್ಷ್ಣವಾದ ಸೂರ್ಯಕಿರಣಗಳಿಂದ ಸಂತಪ್ತನಾಗಿ ದಾಹಗೊಂಡು ಬಹು ವ್ಯಾಕುಲವನ್ನು ಹೊಂದಿ ಒಂದು ವೃಕ್ಷದ ಕೆಳಗೆ ಕುಳಿತುಕೊಂಡನು ಆ ಸಮಯದಲ್ಲಿ ಸರ್ವಾಂಗಸುಂದರಿಯಾದ ಗೊಲ್ಲರ ಹುಡುಗಿಯೋರ್ವಳು ಒಂದು ಕುಂಭವನ್ನು ತಲೆಯ ಮೇಲಿಟ್ಟುಕೊಂಡು ಆ ಮಾರ್ಗವಾಗಿ ಧಾರಾನಗರಕ್ಕೆ ಹೋಗುತ್ತಿದ್ದಳು.

ಭೋಜನು ಅವಳನ್ನು ನೋಡಿ ದಾಹವನ್ನಡಗಿಸಿಕೊಳ್ಳಲಾರದೆ "ಈ ಕನ್ಯೆಯು ಕೊಂಡುಹೋಗುವ ಕುಂಭದಲ್ಲಿ ಯಾವುದಾದರೂ ಪಾನೀಯವಿದ್ದಲ್ಲಿ ತೃಪ್ತಿಯಾಗುವಂತೆ ಕುಡಿದು, ದಾಹವನ್ನು ಶಮನಮಾಡಿಕೊಳ್ಳಬಹುದಲ್ಲವೆ? ಅದು ಏನಾಗಿರುವುದೋ ತಿಳಿಯಲಿಲ್ಲ. ಕೇಳಿ ನೋಡೋಣ" ಎಂದು ಭಾವಿಸಿ 'ಅಹೋ! ತರುಣೀ, ಆ ಕುಂಭದಲ್ಲೇನಿರುವುದು?' ಎಂದು ಮಾತನಾಡಿಸಿದನು. ಆ ಸುಂದರಿಯು ರಾಜನು ದಾಹಪೀಡಿತನಾಗಿರುವನೆಂದು ತಿಳಿದು, ಆತನ ಮುಖಕಮಲವನ್ನು ನೋಡುತ್ತ ಹೀಗೆ ಹೇಳಿದಳು—

ಶ್ಲೋ॥ "ಹಿಮಕುಂದ ಶಶಿಪ್ರಭ ಶಂಖನಿಭಂ।
ಪರಿಪಕ್ವ ಕಪಿತ್ಥ ಸುಗಂಧ ರಸಂ॥
ಯುವತೀಕರ ಪಲ್ಲವ ನಿರ್ಮಥಿತಂ।
ಪಿಬ ಹೇ ನೃಪರಾಜ! ರುಜಾಪಹರಂ॥

ಕಂ॥ ಮಲ್ಲಿಗೆಯ ಮೊಗ್ಗು ಹಿಮವುಂ।
ಬೆಳ್ಳಿಯು ಬೆಳ್ದಿಂಗಳಬ್ಜದಂತೆಸೆಯುವುದುಂ॥
ಒಳ್ಳೆ ಕಪಿತ್ಥ ಸುವಾಸಿತ।
ಮುಳ್ಳುದ ನೀಂ ಸೇವಿಸಂಗನಾ ಕರ ಮಥಿತಂ॥

"ಅಹೋ! ರಾಜಾ, ಮಂಜಿನಂತೆ, ಮಲ್ಲಿಗೆ ಮೊಗ್ಗಿನಂತೆ, ಚಂದ್ರನಂತೆ ಅತಿ ಸ್ವಚ್ಛವಾಗಿರುವುದು. ಚನ್ನಾಗಿ ಪಕ್ವವಾದ ಬೇಲದಹಣ್ಣಿನಂತೆ ಸುವಾಸನೆಯುಳ್ಳುದಾಗಿರುವುದು.

ಯೌವ್ವನವತಿಯ ಹಸ್ತಪಲ್ಲವದಿಂದ ಕಡೆಯಲ್ಪಟ್ಟಿದೆ. ಇದನ್ನು (ಈ ಮಜ್ಜಿಗೆಯನ್ನು) ಪಾನಮಾಡಿದರೆ ಸ್ವಾಮಿಯ ಶ್ರಮವೆಲ್ಲ ತೊಲಗಿ ಹೋಗುವುದು."

ಭೋಜರಾಜನು ಅವಳ ವಾಕ್ಯಾಮೃತವನ್ನು ಮೊದಲು ಪಾನಮಾಡಿ ಅರ್ಧಮರ್ಧ ದಾಹವನ್ನು ಅಡಗಿಸಿಕೊಂಡು ಪ್ರಸನ್ನವದನನಾಗಿ 'ಸುಂದರೀ, ನೀನಾರು? ನಿನ್ನ ಲಜ್ಜೆಯು ನಿನ್ನ ಮನೋಹರವಾದ ದೃಷ್ಟಿಯನ್ನು ಸಂಕೋಚ ಪಡಿಸುತ್ತಿರುವುದು. ನಿನ್ನ ವೃತ್ತಾಂತವನ್ನು ತಿಳಿಸು' ಎಂದು ಕೇಳಿದನು. ಆ ಯುವತಿಯು ಭೋಜರಾಜನ ಸೌಂದರ್ಯವನ್ನು ನೋಡಿ ನವಯೌವನವತಿಯಾದುದರಿಂದ ಆತನನ್ನು ಮೋಹಿಸಿ ಹೀಗೆ ಹೇಳಿದಳು—

ಶ್ಲೋ॥ ಇಂದುಂ ಕೈರವಿಣೀವ ಕೋಕ ಪಟಲೀವಾಂಭೋಜಿನೀವಲ್ಲಭಂ।
ಮೇಘಂ ಚಾತಕಮಂಡಲೀವ ಮಧುಪಶ್ರೇಣೀವ ಪುಷ್ಪವ್ರಜಂ॥
ಮಾಕಂದಂ ಪಿಕ ಸುಂದರೀವ ರಮಣೀವಾತ್ಮೇಶ್ವರಂ ಪ್ರೋಷಿತಂ।
ಚೇತೋವೃತ್ತಿರಿಯಂ ಸದಾ ನೃಪವರತ್ವಾಂದ್ರಷ್ಟುಮುತ್ಕಂಠತೇ॥

ಸೀ॥ ಇಂದುವಂ ಕುಮುದಿನಿಯಂದದಿ ಸೂರ್ಯನ।
ಚಂದದ ಚಕ್ರವಾಕಾಳಿಯಂತೆ॥
ಬಂಧುರಮಾದ ಮೇಘಾಳಿಯಂ ಚಾತಕ।
ಬೃಂದದಂದದೆ ಮಹಾನಂದದಿಂದ॥
ಅಂದದ ಸುಮುಗಳಂ ಮಧುಪಾಳಿಯಂತೆ ಮಾ-।
ಕಂದದ ಮರವ ಕೋಗಿಲೆಯ ತೆರದಿ॥
ಸುಂದರನಾತ ದೇಶಾಂತರದೊಳಗಿರೆ।
ಸುಂದರಿ ತಾಂ ನಿರೀಕ್ಷಿಸುವತೆರದಿ॥

ಗೀ॥ ಇಂದು ನಿನ್ನ ಪದಾರವಿಂದವನು ಕೋರಿ।
ಮಂದಭಾಗ್ಯಳು ತವಕಿಸುತಿರುವೆ ದೇವ॥
ಪೊಂದಿಸೆನ್ನನು ನಿನ್ನಯ ಸುಂದರಿಯರೊಳ್।
ವಂದಿಪೆನು ಮರೆಹೊಕ್ಕೆನು ಪೊರೆವುದಿನ್ನು॥

"ಅಹೋ! ನೃಪವರಾ, ಚಂದ್ರನನ್ನು ಕುಮುದಿನಿಯೂ, ಸೂರ್ಯನನ್ನು ಚಕ್ರವಾಕ ಪಕ್ಷಿಯೂ, ಮೇಘವನ್ನು ಚಾತಕ ಪಕ್ಷಿಯೂ, ಪುಷ್ಪ ಸಮೂಹವನ್ನು ದುಂಬಿಗಳೂ, ಮಾವಿನ

ಗಿಡವನ್ನು ಕೋಗಿಲೆಯೂ, ದೇಶಾಂತರವಾಸಿಯಾದ ನಾಯಕನನ್ನು ನಾಯಕಿಯೂ ಕೋರುವಂತೆ ನನ್ನ ಚಿತ್ತವೃತ್ತಿಯು ಆವಾಗಲೂ ಮಹಾಸ್ವಾಮಿಯನ್ನು ಸೇವಿಸುವುದಕ್ಕೆ ಆತುರಪಡುವುದು"

ಈಕೆಯ ವಾಕ್ಯಗಳಿಗೆ ರಾಜನು ಆಶ್ಚರ್ಯ ಚಕಿತನಾಗಿ—'ಅಹೋ! ತರುಣೀ, ನನ್ನ ಪಟ್ಟಮಹಿಷಿ ಲೀಲಾವತಿ ಇರುವಳು. ಆಕೆಯು ಇಷ್ಟಪಡದಿದ್ದರೆ ಯಾರನ್ನೂ ವಿವಾಹ ಮಾಡಿಕೊಳ್ಳಲಾಗುವುದಿಲ್ಲ. ಲಿಲಾವತಿಯು ಸಮ್ಮತಿಸಿದರೆ ನಿನ್ನನ್ನು ಅವಶ್ಯವಾಗಿ ಪರಿಗ್ರಹಿಸುತ್ತೇನೆ' ಎಂದು ಆಕೆಯನ್ನು ಸದಾ ಭೋಗ್ಯಸ್ತ್ರೀಯಾಗಿ ಪರಿಗ್ರಹಿಸಿದನು.



## ಶಂಕರಕವಿ.

ಒಂದು ದಿನ ಭೋಜರಾಜನು ಸಕಲ ಸಾಮಂತ ವಿದ್ವತ್ಕವೀಂದ್ರರಿಂದ ಪರಿವೇಷ್ಟಿತನಾಗಿ ಸಿಂಹಾಸನದಲ್ಲಿ ಮಂಡಿಸಿದ್ದನು. ಆಗ ಶಂಕರನೆಂಬ ಕವೀಶ್ವರನು ಆ ಸಭೆಗೆ ಬಂದನು. ಭೋಜನು ಆತನ ಮುಖತೇಜವನ್ನೂ, ಕೈಯಲ್ಲಿ ತಾಳೆಯಗರಿ ಇರುವುದನ್ನೂ ನೋಡಿ ವಿದ್ವಾಂಸನೆಂದು ತಿಳಿದು ಸ್ವಾಗತವಿತ್ತು ಕುಳ್ಳಿರಿಸಿದನು. ಶಂಕರಕವಿಯು ಕೈಯೆತ್ತಿ—"ಅಹೋ! ರಾಜಾ, ನಿನಗಭ್ಯುದಯವುಂಟಾಗಲಿ" ಎಂದಾಶೀರ್ವದಿಸಿದನು. ಭೋಜನು ಸಂತೋಷಪಟ್ಟು ಹೀಗೆ ಕೇಳಿದನು.

**ಭೋಜ**—ಕವಿವರ್ಯಾ, ಆ ಪತ್ರಿಕೆಯಲ್ಲಿರುವುದೇನು?

**ಶಂಕರಕವಿ**—ಪದ್ಯವು.

**ಭೋಜ**—ಯಾರದು?

**ಶಂಕರ**—ನಿನ್ನದೇ!

**ಭೋಜ**—ಓದಿರಿ.

**ಶಂಕರ**—ಓದುತ್ತೇನೆ, ಈ ಚಾಮರಗಳನ್ನು ಹಾಕುವವರ ಕಂಕಣ ಝಣಝಣತ್ಕಾರಗಳನ್ನು ಕ್ಷಣಕಾಲ ನಿಲ್ಲಿಸು.

ತರುವಾಯ ಭೋಜನ ಸಭೆಯೆಲ್ಲಾ ಆತನ ಆಜ್ಞಾನುಸಾರವಾಗಿ ನಿಶ್ಶಬ್ದವಾಗಿದ್ದಿತು. ಶಂಕರ ಕವಿಯು ತಾಳಿಯ ಗರಿಯನ್ನು ಕೈಯಲ್ಲಿ ಹಿಡಿದುಕೊಂಡು ಹೀಗೆ ಓದಿದನು :—

ಶ್ಲೋ|| ಯಥಾಯಥಾ ಭೋಜಯಶೋ ವಿವರ್ಧತೇ |
ಸಿತಾಂ ತ್ರಿಲೋಕೀಮಿವ ಕರ್ತುಮುದ್ಯತಂ ||
ತಥಾತಥಾ ಮೇ ಹೃದಯಂ ವಿಧೂಯತೇ |
ಪ್ರಿಯಾಲಕಾಳೀ ಧವಳತ್ವ ಶಂಕಯಾ ||

ಕಂ|| ರಾಜೇಂದ್ರ ನಿನ್ನ ಕೀರ್ತಿ ವಿ |
ರಾಜಿಸುತಂ ಧವಳವರ್ಣದಿಂ ಪರ್ಬುತಿರಲ್ ||
ಮಾಜದೆ ಮತ್ಪ್ರಿಯೆಯಳಕಂ |
ಸಾಜಂ ಧಾವಳ್ಯಮಪ್ಪುದೆಂದಳುಕುವೆ ನಾಂ ||

" ರಾಜಚಂದ್ರಾ, ನಿನ್ನ ಕೀರ್ತಿಯು ಮೂರುಲೋಕವನ್ನೂ ಬೆಳ್ಳಗೆಮಾಡಲು ಪ್ರಯತ್ನಿಸಿ ಬೆಳೆಯುತ್ತಿರುವಾಗಲೆಲ್ಲ ನನ್ನ ಹೆಂಡತಿಯ ಕಪ್ಪಾದ ಮುಂಗುರುಲುಗಳು ಎಲ್ಲಿ ಬಿಳಿದಾಗುವುವೊ ಎಂದು ನನ್ನ ಹೃದಯವು ವಿಶೇಷ ಪರಿತಪಿಸುತ್ತಿರುವುದು "

ಈ ಕವಿಯ ಚಮತ್ಕೃತಿಗೆ ರಾಜನು ಸಂತೋಷಿಸಿ ಆತನಿಗೆ ಹನ್ನೆರಡು ಲಕ್ಷ ಧನವನ್ನು ಕೊಡಿಸಿದನು ಸಭೆಯಲ್ಲಿನ ವಿದ್ವಾಂಸರೆಲ್ಲರೂ ಆಶ್ಚರ್ಯಮಗ್ನರಾಗಿ ತಲೆ ತಗ್ಗಿಸಿಕೊಂಡು ರಾಜಸಭೆಯಲ್ಲಿ ಪ್ರತಿಯಾಡಲಾರದೆ ಇದ್ದರು.

ಆ ದಿನದ ಸಭೆಯು ಮುಗಿದಮೇಲೆ ಭೋಜರಾಜನು ಅಂತಃಪುರಕ್ಕೆ ತೆರಳಿದನು. ಪಂಡಿತರೆಲ್ಲರೂ ರಾಜನು ಸಭೆಯಲ್ಲಿಲ್ಲದಿರುವುದನ್ನು ನೋಡಿ " ಆಹಾ ! ಭೋಜರಾಜನ ಅವಿವೇಕವನ್ನು ಏನೆಂದು ಹೇಳಬಹುದು ? ವೇದಶಾಸ್ತ್ರಗಳನ್ನು ಚೆನ್ನಾಗಿ ತಿಳಿದ ಆಶ್ರಿತಕವಿಗಳಿಗೆ ಒಂದುಲಕ್ಷ ಮಾತ್ರ ಕೊಟ್ಟನು. ಕೇವಲ ಗ್ರಾಮ್ಯಕವಿಯಾದ ಈ ಶಂಕರನಿಗೆ ಹನ್ನೆರಡುಲಕ್ಷ ಕೊಟ್ಟನು. ಇವನ ಅತಿಶಯವೇನು ? ಎಂದು ರಾಜನನ್ನು ನಿಂದಿಸಲಾರಂಭಿಸಿದರು.

ಹೀಗೆ ಸಭೆಯೆಲ್ಲವೂ ಪಂಡಿತರ ಕೋಲಾಹಲದಿಂದ ತುಂಬಿರಲಾಗಿ ಆ ಸಮಯದಲ್ಲಿ ಕನಕಕುಂಡಲಗಳನ್ನು ಧರಿಸಿ, ಕಸ್ತೂರಿ, ಚಂದನ ಮುಂತಾದ

ಸುಗಂಧದ್ರವ್ಯಗಳ ವಾಸನೆಯು ವಿಸ್ತರಿಸುತ್ತಿರಲು ಮೂರ್ತಿಮಂತ ವಿಲಾಸದಂತೆ ಅತಿ ಸುಂದರನೂ ಮಹಾಕವಿಯೂ ಆದ ಒಬ್ಬ ಮಹಾಪುರುಷನು ಅಲ್ಲಿಗೆ ಬಂದನು. ಅವನ ಕಾಂತಿಯನ್ನು ನೋಡಲಾಗಿ ಸ್ವರ್ಗದಿಂದ ಭೂಮಿಗಿಳಿದುಬಂದ ಬೃಹಸ್ಪತಿಯಂತೆ ಪ್ರಕಾಶಿಸುತ್ತಿದ್ದನು. ವಿದ್ವಾಂಸರೆಲ್ಲರೂ ಆತನನ್ನು ನೋಡಿ ಒಬ್ಬರ ಮುಖವನ್ನೊಬ್ಬರು ನೋಡಿಕೊಳ್ಳುತ್ತಾ ಸ್ತಬ್ಧರಾಗಿದ್ದರು. ಆ ಮಹಾಪುರುಷನು ಮತ್ತಾರೂ ಅಲ್ಲ; ನಮ್ಮ ಕವಿರತ್ನ ಕಾಳಿದಾಸನೇ! ಅಂತಹ ತೇಜೋರಾಶಿಯೂ, ಅಂತಹ ಸುಂದರನೂ, ವಿದ್ವಾಂಸನೂ ಮತ್ತಾವನಿರುವನು ?

ತದನಂತರ ಸಭೆಯಲ್ಲಿನ ವಿದ್ವಾಂಸರನ್ನು ಕಂಡು "ಭೋಜರಾಜನೆಲ್ಲಿ" ಎಂದು ಕೇಳಿದನು. "ಈಗಲೇ ಅಂತಃಪುರಕ್ಕೆ ಹೋದರು" ಎಂದು ಹೇಳಿದರು.

ಆಗಲಾ ಕಾಳಿದಾಸನು ಪ್ರತ್ಯೇಕವಾಗಿ ವಿದ್ವಾಂಸರಿಗೆಲ್ಲ ತಾಂಬೂಲವನ್ನು ಕೊಟ್ಟು ಅಲ್ಲಿ ನಡೆದ ವೃತ್ತಾಂತವನ್ನು ತಿಳಿದು ಶಂಕರಕವಿಯಮೇಲೆ ಇವರೆಲ್ಲರೂ ಅಸೂಯೆ ಪಟ್ಟಿರುವರೆಂದು ಅವರ ಮುಖಲಕ್ಷಣದಿಂದಲೇ ಗ್ರಹಿಸಿ ಹೀಗೆ ಹೇಳಿದನು :—

"ಅಹೋ! ಕವಿವರರೇ, ಭೋಜಮಹಾರಾಜನು ಶಂಕರಕವಿಗೆ ಹನ್ನೆರಡುಲಕ್ಷ ಏತಕ್ಕೆ ಕೊಟ್ಟಿರುವನೆಂದು ನೀವು ಗುರುತಿಸಲಿಲ್ಲ. ಈ ಧನದಲ್ಲಿ ಶಂಕರನಿಗೆ ಒಂದುಲಕ್ಷಮಾತ್ರವೇ, ಇನ್ನುಳಿದ ಹನ್ನೊಂದುಲಕ್ಷ ಈತನ ಹೆಸರಿನವರಾದ ಏಕಾದಶರುದ್ರರಿಗೆ ಕೊಟ್ಟಿರುವನು. ಇದೇ ಮಹಾರಾಜನ ಅಭಿಪ್ರಾಯವು" ಎಂದು ನುಡಿಯಲು ಸಭೆಯವರೆಲ್ಲ ಇದು ಅತಿ ಚಮತ್ಕಾರವೆಂದು ಭಾವಿಸಿದರು. ಈ ಸಮಾಚಾರವನ್ನು ಓರ್ವ ರಾಜಪುರುಷನು ಭೋಜರಾಜನಿಗೆ ಅರಿಕೆ ಮಾಡಲು, ಭೋಜನು ತನ್ನ ಅಂತರಂಗವಾದ ಅಭಿಪ್ರಾಯವನ್ನು ಗುರುತಿಸಿದಾತನು ಮಹಾನುಭಾವನೆಂದರಿತು, ತತ್‌ಕ್ಷಣ ಆ ಕವಿಸಾರ್ವಭೌಮನನ್ನು ನೋಡುವುದಕ್ಕಾಗಿ ಸಭೆಗೆ ಬಂದು ಸಿಂಹಾಸನಾರೋಹಣ ಮಾಡಿದನು. ಕವಿಕಾಳಿದಾಸನು "ಮಂಗಳವಾಗಲಿ" ಎಂದಾಶೀರ್ವದಿಸಿ ಗಂಭೀರವಾದಸ್ವರದಿಂದ ರಾಜಮೌಳಿಯಮುಂದೆ ನಿಂತು ಈರೀತಿ ಪಠಿಸಿದನು—

ಶ್ಲೋ॥ "ಮಹಾರಾಜ ಶ್ರೀಮನ್ ಜಗತಿ ಯಶಸಾ ತೇ ಧವಳಿತೇ।
ಪಯಃಪಾರಾವಾರಂ ಪರಮಪುರುಷೋಯಂ ಮೃಗಯತೇ॥
ಕಪರ್ದೀ ಕೈಲಾಸಂ ಕವಿವರಮಭೌಮಂ ಕುಲಿಶಭೃತ್।
ಕಲಾನಾಥಂ ರಾಹುಃ ಕಮಲಭವನೋ ಹಂಸಮಧುನಾ"॥

ಸೀ॥ ಶ್ರೀಮಂತ ಧೀಮಂತ ಭೂಮಿಪ ಭೋಜನೇ
ಸೌಮ್ಯದಿ ನಿನ್ನುರುಕೀರ್ತಿಯಖಿಳ॥
ಭೂಮಿಯಂ ಬೆಳ್ಳಿಯಂದದಿ ಬೆಳಗುತ್ತಲಿ
ತಾಮಸವಿಲ್ಲದೆ ಹಬ್ಬುತಿರಲು
ಕಾಮನಯ್ಯನು ಕ್ಷೀರಜಲಧಿಯನಂತೆಯೆ
ಕಾಮವೈರಿಯು ಬೆಳ್ಳಿ ಬೆಟ್ಟವನ್ನು
ಆ ಮಹಾಇಂದ್ರನೈರಾವತವನು ರಾಹು
ಸೋಮನಂ ಬ್ರಹ್ಮನು ಹಂಸವನ್ನು

ಗೀ॥ ಈ ಮಹಾವಸ್ತುಗಳ ಗುರುತರಿಯದಂದು
ಭ್ರಾಮುಕದಿ ಹುಡುಕುತ್ತಿಹರೈದೆ ಸತತ
ನಾಮಶೂನ್ಯಮದಾಗಲು ಭ್ರಾಂತರಾಗಿ
ನೇಮನಿಯಮಗಳೆಲ್ಲವನುಳಿಯುತವರು

"ಅಹೋ ಮಹಾರಾಜ ಶ್ರೀಮಂತನೇ, ನಿನ್ನ ಕೀರ್ತಿಯಿಂದೀಲೋಕವೆಲ್ಲ ಬಿಳುಪಾಗಲು ವಿಷ್ಣುವು ಹಾಲುಕಡಲನ್ನೂ, ಶಿವನು ಕೈಲಾಸವನ್ನೂ, ಇಂದ್ರನು ಐರಾವತವನ್ನೂ, ರಾಹುವುಚಂದ್ರನನ್ನೂ, ಬ್ರಹ್ಮನು ಹಂಸವನ್ನೂ ತಿಳಿದುಕೊಳ್ಳಲಾಗದೆ ಬೆದಕುತ್ತಲಿರುವರು"

ಈ ಕರ್ಣಾಮೃತವಾದ ಶ್ಲೋಕವನ್ನು ಕೇಳಿ ಭೋಜರಾಜನು ಅತ್ಯಾನಂದವನ್ನುಪೊಂದಿ, ಪೂರ್ವದಿಕ್ಕಿನಿಂದ ದಕ್ಷಿಣದಿಕ್ಕಿಗೆ ತಿರುಗಿದನು. ಕಾಳಿದಾಸನು ಭೋಜರಾಜನಿಗೆ ಈ ಶ್ಲೋಕವು ವಿಷಾದವನ್ನುಂಟುಮಾಡಿ ವಿಮುಖನಾಗಿರಬಹುದೆಂದರಿತು ಆತನಿಗಭಿಮುಖವಾಗಿ ಹೋಗಿ ಮತ್ತೆ ಹೀಗೆ ಹೇಳಿದನು :—

ವೃ|| "ನೀರಕ್ಷೀರೇ ಗೃಹೀತ್ವಾ ನಿಖಿಲಜಗತತೀರ್ಯಾತಿ ನಾಳೀಕಜನ್ಮಾ |
ತಕ್ರಂಧೃತ್ವಾ ತುಸರ್ವಾನಟತಿಜಲನಿಧೀಂಶ್ಚಕ್ರಪಾಣಿರ್ಮುಕುಂದಃ ||
ಸರ್ವಾನುತ್ತುಂಗಶೈಲಾನ್ ದಹತಿ ಪಶುಪತಿಃ ಫಾಲನೇತ್ರೇಣ ಪಶ್ಯನ್ |
ವ್ಯಾಪ್ತಾತ್ವತ್ಕೀರ್ತಿಕಾಂತಾತ್ರಿಜಗತಿನೃಪತೇ ಭೋಜರಾಜಕ್ಷಿತೀಂದ್ರಃ" ||

ಸೀ|| ಸರಸಿಜಭವನು ನೀರನ್ನು ಹಾಲನ್ನು ತಾಂ
ಬೆರಸುತಲಿಲ್ಲ ಹಂಸಗಳಿಗಿಡುವ
ಹರಿಯು ಸಪ್ತ ಸಮುದ್ರದೊಳಗೆಲ್ಲ ಮಜ್ಜಿಗೆ
ಬೆರಸುತಲಿರುವನು ತಿರುಗಿ ತಿರುಗಿ
ಹರನು ತಾನಗ್ನಿನೇತ್ರದೊಳೆಲ್ಲ ಗಿರಿಗಳ
ಭರದೊಳು ಸುಡುತಲಿರ್ದಪನು ಬಿಡದೆ
ಅರರೆ! ತಾನಿಂತು ತ್ರಿಮೂರ್ತಿಗಳಿಗು ನಿನ್ನ
ವರಕೀರ್ತಿ ಮೋಸವಮಾಡಿತಯ್ಯ

ಗೀ|| ಬೆರೆತ ಪಾಲನು ನೀರನು ರಾಜಹಂಸ
ವಿರದೆ ಬೇರ್ಪಡಿಸುವುದಿದು ನೈಜವಲ್ತು?
ಇರಿಸೆ ಮಜ್ಜಿಗೆ ಹಾಲೊಳು ಮೊಸರೆನಿಪುದು
ಉರಿಯೆ ಬೆಳ್ಳಿಯಬೆಟ್ಟವು ಕರಗುತಿಹುದು

'ಭೋಜರಾಜೇಂದ್ರ, ನಿನ್ನ ಆ ಯಶಃಕಾಂತಿಯು ತ್ರಿಲೋಕದಲ್ಲೂ ವ್ಯಾಪಿಸಿರಲಾಗಿ ಬ್ರಹ್ಮನು ನೀರನ್ನೂ ಹಾಲನ್ನೂ ಬೆರಸಿ, ಎಲ್ಲಾ ಜಾತಿಯ ಪಕ್ಷಿಗಳಿಗೂ ಇಡುತ್ತಿರುವನು. (ಹಂಸವು ನೀರನ್ನೂ ಹಾಲನ್ನೂ ಬೇರೆಮಾಡುವುದು) ಚಕ್ರಪಾಣಿಯಾದ ನಾರಾಯಣನು ಮಜ್ಜಿಗೆಯನ್ನು ಎಲ್ಲಾ ಸಮುದ್ರದಲ್ಲಿಯೂ ಹಾಕುವನು. (ಹಾಲಿನಲ್ಲಿ ಮಜ್ಜಿಗೆ ಸೇರಿದರೆ ಗಟ್ಟಿಯಾಗುವುದು) ಶಿವನು ತನ್ನ ಅಗ್ನಿನೇತ್ರದಿಂದ ಪರ್ವತಗಳನ್ನೆಲ್ಲಾ ದಹಿಸುತ್ತಿರುವನು. (ಬೆಳ್ಳಿಯ ಬೆಟ್ಟವು ಕರಗುವುದು)"

ಈ ಶ್ಲೋಕವನ್ನು ಕೇಳಿ ಭೋಜರಾಜನು ದಕ್ಷಿಣದಿಂದ ಪಶ್ಚಿಮಾಭಿಮುಖವಾಗಿ ಕುಳಿತುಕೊಂಡನು ಕಾಳಿದಾಸನು "ನನ್ನ ಕವಿತ್ವವು ಈತನಿಗೆ ರುಚಿಸದೆ ಹೀಗೆ ತಿರುಗಿಕೊಳ್ಳುವನು" ಎಂದೂಹಿಸಿ ಆತನಿಗಭಿಮುಖವಾಗಿ ನಿಂತು ಹೀಗೆ ಹೇಳಿದನು :--

ಶ್ಲೋ॥ “ ವಿದ್ವದ್ರಾಜಶಿಖಾಮಣೇ ತುಲಯಿತುಂ ಧಾತಾ ತ್ವದೀಯಂ ಯಶಃ ।
ಕೈಲಾಸಂ ಚ ನಿರೀಕ್ಷ್ಯತತ್ರಲಘುತಾಂ ನಿಕ್ಷಿಪ್ತವಾರ್ನ್ ಪೂರ್ತಯೇ ॥
ಉಕ್ಷಾಣಂ ತದುಪರ್ಯುಮಾಸಹಚರಂ ತನ್ಮೂರ್ಧ್ನಿ ಗಂಗಾಜಲಂ ।
ತಸ್ಯಾಗ್ರೇ ಫಣಿಪುಂಗವಂ ತದುಪರಿ ಸ್ಫಾರಂ ಸುಧಾದೀಧಿತಿಂ ॥ ”

ಸೀ॥ ಕವಿಕಲ್ಪವೃಕ್ಷ ನಿನ್ನವಿರಳ ಕೀರ್ತಿಯ
ಕವಿ ಪಿತಾಮಹನು ತಾಂ ತೂಗಲೆಳಸಿ
ತವೆ ಬೆಳ್ಳಿಬೆಟ್ಟವನಿಡೆ ಲಘುವಾಗಲು
ಶಿವನ ವಾಹನವಾದ ಬಸವನನ್ನು
ತವಕದೊಳದರಮೇಲರ್ಧ ನಾರೀಶನ
ಅವನ ಮೇಲಮರಗಂಗೆಯನು ನಿಲಿಸಿ
ಭುವನವ ಪೊತ್ತಾದಿಶೇಷನ ತಂದಿಟ್ಟು
ಕುವಲಯಾರಿಯ ನಿಲ್ಲಿಸಿದನು ಕೊನೆಗೆ

ಗೀ॥ ಇವುಗಳೆಲ್ಲವು ಹಗುರವಾಗುವುದ ಕಂಡು
ಭುವನಪಾಲಕ ಅಚ್ಚರಿಗೊಂಡ ವಿಧಿಯು
ನವವಿಧಾವುಳ ರಾಜನು ಕವಿಯು ನೀನು
ಶಿವನ ಕೃಪೆ ನಿನಗಾಗಲಿ ಸುಸಮಯದಲಿ

“ ಪಂಡಿತಶಿಖಾಮಣಿಯಾದ ಅಹೋ ರಾಜಾ, ಬ್ರಹ್ಮನು ನಿನ್ನ ಕೀರ್ತಿಯನ್ನು ಕೈಲಾಸಕ್ಕೆ ಸರಿತೂಗಿಸಲೆಳಸಿದಾಗ ಆ ಕೈಲಾಸವೇ ಹಗುರವಾಯಿತು. ತೂಕವನ್ನು ಸರಿಮಾಡುವುದಕ್ಕಾಗಿ ಅದರಮೇಲೆ ಶಿವನ ಎತ್ತನ್ನೂ, ಅದರಮೇಲೆ ಶಿವನನ್ನೂ, ಅವನಮೇಲೆ ಗಂಗೆಯನ್ನೂ, ಅದರಮೇಲೆ ಆದಿಶೇಷನನ್ನೂ ಅದರಮೇಲೆ ಬಿಳಿದಾದ ಚಂದ್ರನಕಳೆಯನ್ನೂ ಇಟ್ಟು ತೂಗಿದನು ”

ಮತ್ತೆ ಭೋಜರಾಜನು ಈ ಶ್ಲೋಕವನ್ನು ಕೇಳಿ ಉತ್ತರ ಮುಖನಾದನು. ಕಾಳಿದಾಸನಾದರೋ ಪಟ್ಟುಹಿಡಿದು ಹೇಗಾದರೂ ಮಾಡಿ ಸಂತೋಷಪಡಿಸಬೇಕೆಂದು ಆತನಿಗಭಿಮುಖವಾಗಿ ಹೋಗಿ ಮತ್ತೆ ಹೀಗೆ ಹೇಳಿದನು—

ಶ್ಲೋ|| ಸ್ವರ್ಗಾದ್ಗೋಪಾಲ ಕುತ್ರವ್ರಜಸಿ ಸುರಮುನೇ ಭೂತಲೇ ಕಾಮಧೇನೋಃ |
ವತ್ಸಸ್ಯಾನೇತುಕಾಮಸ್ತೃಣಚಯಮಧುನಾ ಮುಗ್ಧ ದುಗ್ಧಂ ನ ತಸ್ಯಾಃ ||
ಶ್ರುತ್ವಾ ಶ್ರೀಭೋಜರಾಜಪ್ರಚುರವಿತರಣಂ ವ್ರೀಡಶುಷ್ಕಸ್ತನೀ ಸಾ |
ವ್ಯರ್ಥೋಹಿಸ್ಯಾತ್ಪ್ರಯಾಸಸ್ತದಪಿತದರಿಭಿರ್ಭಕ್ಷಿತಂ ಸರ್ವಮುರ್ವ್ಯಾಮ್ ||

ಸೀ|| ನಾರದಮುನಿ ಸ್ವರ್ಗದಿಂ ಬರ್ಪ ಗೊಲ್ಲನ
ಸಾರಿಕೇಳಿದನೆಲ್ಲಿಪೋಪೆಯೆಂದು
ಧಾರುಣಿಗಿಳಿದು ಹುಲ್ಲನ್ನು ನಾಂ ತರುವೆನು
ಆರಿಸಿ ಕಾಮಧೇನುವಿನ ಮರಿಗೆ
ಪೋರನೆ ಕಾಮಧೇನುವಿಗೆ ಪಾಲಿಲ್ಲವೆ?
ಯಾರು ಪೇಳಿದರು ಛೀ! ಮೂರ್ಖ ನಿನಗೆ
ನಾರದಮುನಿವರ, ಭೋಜನೌದಾರ್ಯದಿಂದ
ದಾರಯೆ ಬತ್ತಿದುದೆಲ್ಲ ಪಾಲು

ಗೀ|| ಸೂರಿಜನಗಳಿಗಿಡುವ ದಾತಾರ ವೀರ
ಧೀರ ಭೋಜನ ಶತ್ರುಗಳೆಲ್ಲ ತೃಣವ
ಚೂರುವುಳಿಸದೆ ತಿಂದರು ನಿನ್ನ ಶ್ರಮೆಯು
ತೀರಲಾರದು ಪೋಗು ಹಿಂದಕ್ಕೆ ತಿರುಗು

ನಾರದ—ಎಲವೋ ಗೊಲ್ಲರವನೇ, ಸ್ವರ್ಗದಿಂದ ಎಲ್ಲಿಗೆ ಹೋಗುವೆ?

ಗೊಲ್ಲರವನು—ನಾರದಮುನಿಯೇ, ಈಗ ಕಾಮಧೇನುವಿನ ಕರುವಿಗೆ ಹುಲ್ಲನ್ನು ತರುವುದಕ್ಕಾಗಿ ಭೂಲೋಕಕ್ಕೆ ಹೋಗುತ್ತೇನೆ.

ನಾರದ—ಮೂರ್ಖ, ಕಾಮಧೇನುವಿಗೆ ಹಾಲಿಲ್ಲವೇನೋ?

ಗೊಲ್ಲರವನು—ಶ್ರೀ ಭೋಜರಾಜನ ಪ್ರಸಿದ್ಧವಾದ ದಾತೃತ್ವವನ್ನು ಕೇಳಿ ಕಾಮಧೇನುವಿನ ಮೊಲೆಗಳು ಬತ್ತಿಹೋಗಿರುವುವು

ನಾರದ—ಹಾಗಾದರೆ ನಿನ್ನ ಶ್ರಮ ವ್ಯರ್ಥವಲ್ಲವೇ? ಭೂಮಿಯಲ್ಲಿನ ಹುಲ್ಲೆಲ್ಲವನ್ನೂ ಭೋಜನ ಶತೃಗಳು (ಕೃಪಣರು) ತಿಂದೇಹಾಕಿರುವರು!

ಈ ಅದ್ಭುತವಾದ ಶ್ಲೋಕವನ್ನು ಕೇಳಿ ಭೋಜರಾಜನು ಸಿಂಹಾಸನದಿಂದಿಳಿದುಬಂದು ಸಭಾಸದರಿಗೆ ನಮಸ್ಕರಿಸಿ—“ ಆರ್ಯರೇ, ಈದಿನ ಮೊದಲು ನನ್ನ ದೇಶಕ್ಕೆಲ್ಲ ಈ ಕವಿಚಂಪ್ರನೇ ಅಧಿಪತಿಯು, ನಾಕ್ಕುದಿಕ್ಕುಗಳುಳ್ಳರಾಜ್ಯ

ವನ್ನು ನಾಲ್ಕು ಶ್ಲೋಕಗಳಿಗೆ ಕೊಟ್ಟು ಬಿಟ್ಟೆನು" ಎಂದು ಹೊರಡಲುದ್ಯುಕ್ತನಾದನು.

ಕಾಳಿದಾಸನು ಮಹದಾಶ್ಚರ್ಯವನ್ನು ಹೊಂದಿ—"ಅಹೋ! ಬ್ರಾಹ್ಮಣನಾದ ನನಗೆ ರಾಜ್ಯವೇಕೆ? ರಾಜ್ಯಭಾರವನ್ನು ವಹಿಸಲು ಕ್ಷತ್ರಿಯನಲ್ಲವೇ ಅರ್ಹನು?" ಆದುದರಿಂದ ರಾಜ್ಯವನ್ನು ನಾನು ಪರಿಗ್ರಹಿಸಲಾರೆನೆಂದು ದೃಢವಾಗಿ ನುಡಿದನು.

ಭೋಜಮಹಾರಾಜನು ಬುದ್ಧಿಸಾಗರನಅನುಮತಿಯಮೇರೆಗೆ ರಾಜ್ಯಕ್ಕೆ ಪ್ರತಿಫಲವಾಗಿ ಕೆಲವು ಲಕ್ಷ ದ್ರವ್ಯವನ್ನು ಕೊಟ್ಟು, ಕಾಳಿದಾಸನಿಂದ ಪುನಃ ರಾಜ್ಯವನ್ನು ಕೊಂಡುಕೊಂಡನು. ಅದುಮೊದಲು ಭೋಜನು ಕಾಳಿದಾಸನನ್ನು ಸರಸ್ವತಿಯ ಅಪರಾವತಾರವೆಂದು ಭಾವಿ ಪರಮ ಮೈತ್ರಿಯಿಂದ ನೋಡುತ್ತಿದ್ದನು. ಆಕೃತಿಗಳು ಬೇರೆಯಾಗಿದ್ದರೂ, ಭೋಜಕಾಳಿದಾಸನ ಮನಸ್ಸೊಂದಾಗಿದ್ದಿತು.



## ಬ್ರಾಹ್ಮಣನ ಕಳ್ಳತನ.

ಒಂದಾನೊಂದು ಸಮಯದಲ್ಲಿ ಮುಖ್ಯಮಂತ್ರಿಯು, ಭೋಜಮಹಾರಾಜನು ವಿಶೇಷ ದ್ರವ್ಯವ್ಯಯಮಾಡುವುದನ್ನು ನೋಡಿ, ಸಹಿಸಲಾರದೆ ರಾಜನ ಶಯನಗೃಹಕ್ಕೆ ಹೋಗಿ, ಒಂದು ಗೋಡೆಯಮೇಲೆ ಈ ಶ್ಲೋಕಪಾದವನ್ನು ಬರೆದನು—

"ಅಪದರ್ಥಂ ಧನಂ ರಕ್ಷೇತ್"

ಸೀ|| ಆಪತ್ತಿಗೊದಗುವಂದದಿ ಧನವನ್ನು ನಿ
ಕ್ಷೇಪಮಾಡಿಡುವುದೆ ಧೀಮತಮದು

"ಆಪತ್ಕಾಲದಲ್ಲಿ ಸಹಾಯ ಮಾಡುವುದಕ್ಕಾಗಿ ಧನವನ್ನು ಕಾಪಾಡಿಕೊಳ್ಳಬೇಕು"

ಭೋಜರಾಜನು ಶಯನಗೃಹದಿಂದೆದ್ದು, ಆ ಶ್ಲೋಕಪಾದವನ್ನು ಓದಿ ವಿಶೇಷ ವ್ಯಾಕುಲಪಟ್ಟು, ಆ ಚರಣದ ಕೆಳಗೆ ಎರಡನೆಯ ಚರಣವನ್ನು ಹೀಗೆ ಬರೆದನು—

"ಶ್ರೀಮತಾಮಾಪದಃ ಕುತಃ?"

ಆಪತ್ತದೆಲ್ಲಿ ಬರ್ಪುದು ಸಿರಿವಂತಗೆ
ತಾಪಗಳೆಂದೊಡೇನವಗೆ ಜಗದಿ

"ಶ್ರೀಮಂತರಿಗೆ ಆಪತ್ತುಗಳೆಲ್ಲಿಯವು?

ಮರುದಿನ ಮಂತ್ರಿಯು ತಾನುಬರೆದ ಚರಣಕ್ಕೆ ಬದಲು ಬರೆದಿರುವು ವನ್ನು ನೋಡಿ ಅಷ್ಟಕ್ಕೆ ಸುಮ್ಮನಿರದೆ ಮೂರನೆಯ ಚರಣವನ್ನು ಬರೆದನು-

"ಸಾಚೇದಪಗತಾ ಲಕ್ಷ್ಮೀಃ?"

ರೂಪಿಪ ಸಂಪತ್ತು ತೊಲಗಿದೊಡಾ ವಿ-
ರೂಪವಾಗದಲುಳಿಯುವುದೆ ಧರೆಯೊಳ್

"ಸಂಪತ್ತು ಹೋದರೋ?"

ಭೋಜನು ಸಮಾಧಾನಪೂರ್ವಕವಾಗಿ ನಾಲ್ಕನೆಯ ಚರಣವನ್ನು ಹೀಗೆ ಬರೆದನು—

"ಸಂಚಿತಾರ್ಥೋಽಪಿ ನಶ್ಯತಿ"

ಜೋಪಾನ ಮಾಡಿದರ್ಥವು ವ್ಯರ್ಥವಾದೊಡೆ
ಯೇಪರಿ ಗೈವನಾವೇಳೆಯಲ್ಲಿ?

"ಕೂಡಿಟ್ಟ ದ್ರವ್ಯವೂ ಸಹ ಹೋಗುವುದು"

ಹೀಗೆ ಮಂತ್ರಿಯು ತನ್ನ ವಾಕ್ಯಗಳಿಗೆಲ್ಲ ವಿರುದ್ಧವಾಗಿ ಸಮಾಧಾನ ಬರೆದಿರುವುದನ್ನು ನೋಡಿ ರಾಜನಿಗೆ ತನ್ನ ಮೇಲೆ ಕೋಪವುಂಟಾಯಿತೆಂದು ನಮಸ್ಕರಿಸಿ—ರಾಜೇಂದ್ರಾ, ನನ್ನ ಅಪರಾಧವನ್ನು ಕ್ಷಮಿಸಬೇಕೆಂದು ಬೇಡಿ ಕೊಂಡನು. ಭೋಜನು ಮಂತ್ರಿಗೆ ನೀತಿಬೋಧೆ ಮಾಡಿ ಕಳುಹಿಸಿ ಶಯನ ಗೃಹದಲ್ಲಿ ಲೀಲಾವತಿಯ ಸಂಗಡ ಸರಸಸಲ್ಲಾಪಗಳನ್ನಾಡುತ್ತ ಶೃಂಗಾರ ಗೋಷ್ಠಿಯಲ್ಲಿದ್ದನು.

ಆ ರಾತ್ರಿ ಓರ್ವ ಬ್ರಾಹ್ಮಣನು ಜೀವನಾಧಾರವಿಲ್ಲದೆ ಭೋಜರಾಜನ ಶಯನಗೃಹಕ್ಕೆ ಕನ್ನವನ್ನು ಹಾಕಿ ಒಳಗೆ ಪ್ರವೇಶಿಸಿ, ಅಲ್ಲಿರುವ ಅನೇಕ ರತ್ನಾಭರಣಗಳನ್ನೂ, ಅನೇಕ ಬಂಗಾರವನ್ನೂ, ದ್ರವ್ಯವನ್ನೂ, ಪಟ್ಟೆ ವಸ್ತ್ರ

ಗಳನ್ನೂ ಮೂಟೆಕಟ್ಟಿ ಎತ್ತಿಕೊಂಡುಹೋಗುವುದಕ್ಕೆ ಮನಸ್ಸುಬಾರದೆ ಆಲೋಚಿಸುತ್ತಿದ್ದನು.

" ಈ ರತ್ನಾಭರಣ ಮೊದಲಾದ ವಸ್ತ್ರಗಳನ್ನು ಮನೆಯ ಯಜಮಾನನಿಗೆ ತಿಳಿಯದಂತೆ ಕದ್ದುಕೊಂಡೆನಲ್ಲಾ, ಕಳ್ಳತನದಿಂದ ಬರುವ ಪಾಪವು ಹಾಗಿರಲಿ, ಈ ಸಾಲವನ್ನೆಲ್ಲ ಜನ್ಮಾಂತರದಲ್ಲಿ ತೀರಿಸಲೇಬೇಕಲ್ಲವೇ? ಅದರಿಂದ ಲಾಭವೇನು? ಲೋಕದಲ್ಲಿ ಪೂರ್ವಜನ್ಮದ ಪಾಪದಿಂದ ಕೆಲವರು ಕುರುಡರಾಗಿಯೂ, ಕೆಲವರು ಕುಂಟರಾಗಿಯೂ, ಕೆಲವರು ರೋಗಿಗಳಾಗಿಯೂ,, ಕೆಲವರು ದರಿದ್ರರಾಗಿಯೂ, ಹುಟ್ಟಿ, ಆಯಾ ಪಾಪಫಲವನ್ನು ಅನುಭವಿಸುತ್ತಲಿರುವರು. ಇಷ್ಟನ್ನೂ ಕೇಳಿ ತಿಳಿದು ಪಾಪಕಾರ್ಯಗಳನ್ನೇಕೆ ಮಾಡಬೇಕು? ಎಂದಾಲೋಚಿಸಿ ಕದ್ದವಸ್ತ್ರಗಳನ್ನು ಅಲ್ಲಿಯೇ ಬಿಟ್ಟು ವೈರಾಗ್ಯವನ್ನು ಹೊಂದಿ ಹೊರಗೆ ಹೋಗಲು ಉದ್ಯುಕ್ತನಾದನು.

ಆ ಸಮಯದಲ್ಲಿ ಭೋಜರಾಜನು ತನ್ನ ರಥಗಳು, ಆನೆಗಳು. ಕುದುರೆಗಳು. ಸೈನ್ಯವೇ ಮೊದಲಾದ ಸಂಪತ್ತುಗಳನ್ನು ನೆನೆದುಕೊಂಡು ಲೀಲಾವತಿಯ ಸಂಗಡ ಹೀಗೆ ಹೇಳಿದನು—

ವೃ|| ಚೇತೋಹರಾಯುವತಯಸ್ಸುಹೃದೋನುಕೂಲಾಃ |
ಸದ್ಬಾಂಧವಾಃ ಪ್ರಣಯಗರ್ಭಗಿರಶ್ಚ ಭೃತ್ಯಾಃ |
ವಲ್ಗಂತಿ ದಂತಿನಿವಹಾಸ್ತರಳಾಸ್ತುರಂಗಾಃ ||

ಸೀ|| ಸತಿಯುತ್ತಮಳು ಹಿತರನುಕೂಲರಾಗಿಹರ್ |
ಮತಿಯುತರಾ ಬಂಧುವರ್ಗದವರು ||
ಸತತ ಸೇವಕರತಿವಿನಯ ಸಂಭಾಷಿತ |
ರತುಲಿತಮಾ ದಂತಿನಿಚಯಮೈದೆ ||
ಖತಿಯುಂಟುಮಾಳ್ಪವು ಕುಣಿಯುತೆ ತುರಗ ಸಂ |
ತತಿಗಳು ಹೂಂಕರಿಸುತ್ತಲನಿಶ ||

" ಹೆಂಡತಿಯು ಮನೋಹಾರಿಣಿಯು, ಮಿತ್ರರು ಅನುಕೂಲರು, ಬಂಧುಗಳು ಬಹು ಉತ್ತಮರು ಸೇವಕರು ಬಹು ಪ್ರಿಯರಾಗಿ ಮಾತನಾಡುವವರು, ಮದಿಯಾನೆಗಳು ಅಂದವಾಗಿ ಸುತ್ತುತ್ತಲಿರುವುವು, ಕುದುರೆಗಳು ಚಟುವಟಿಕೆಯುಳ್ಳವು "

ಹೀಗೆ ಹೇಳಿ ನಾಲ್ಕನೆಯ ಪಾದವು ಸ್ಫುರಿಸದೆ ಆಲೋಚಿಸುತ್ತಿದ್ದನು. ಇಷ್ಟರಲ್ಲಿ ಮೂಲೆಯಲ್ಲಿದ್ದ ಬ್ರಾಹ್ಮಣಕಳ್ಳನು ಆ ಮೂರು ಪಾದಗಳನ್ನು ಕೇಳಿ ತಾನು ವೈರಾಗ್ಯ ಹೊಂದಿದವನಾದುದರಿಂದ ಸಹಿಸಲಾರದೆ ನಾಲ್ಕನೆಯ ಪಾದ ಹೀಗೆ ಹೇಳಿದನು—

**ಸಮ್ಮೀಲನೇ ನಯನಯೋರ್ನಹಿ ಕಿಂಚಿದಸ್ತಿ**

ಅತಿಶಯಸಂಪದವೆಲ್ಲವು ತಾನೆ ತಾಂ
ನಶಿಸಿದಮೇಲೊಂದುಮಿಲ್ಲವಷ್ಟೇ?

**“ಎರಡು ಕಣ್ಣುಗಳೂ ಮುಚ್ಚಿಹೋದಮೇಲೆ ಯಾವುದೂ ಇಲ್ಲವಲ್ಲವೇ?”**

ಭೋಜರಾಜನೀ ಶ್ಲೋಕಪಾದವನ್ನು ಕೇಳಿ ಆಶ್ಚರ್ಯಪಟ್ಟು—“ಈ ನಿಶೀಥಕಾಲದಲ್ಲಿ ಇಲ್ಲಿ ಯಾವ ಮನುಷ್ಯನೂ ಇಲ್ಲವಲ್ಲಾ! ಈ ಶ್ಲೋಕಪಾದವನ್ನು ಯಾರು ಹೇಳಿರಬಹುದು? ಆಕಾಶವಾಣಿಯು ನುಡಿದಿರಬಹುದೇ?” ಎಂದು ಶಯನಮಂದಿರದಿಂದೆದ್ದು ನಾಲ್ಕು ದಿಕ್ಕುಗಳನ್ನೂ ನೋಡಿದನು. ಒಂದು ಮೂಲೆಯಲ್ಲಿ ಕನ್ನದ ಹತ್ತಿರ “ನಾನು ಬ್ರಾಹ್ಮಣನು, ನನ್ನ ತಪ್ಪನ್ನು ಕ್ಷಮಿಸಬೇಕು” ಎಂದು ಬಿನ್ನೈಸಿದನು.

ರಾಜನು ಆತನೇ ಶ್ಲೋಕಪಾದವನ್ನು ಹೇಳಿರುವನೆಂದು ತಿಳಿದುಕೊಂಡು ಸಂತೋಷಿಸಿ ಪ್ರಸನ್ನವದನನಾಗಿ ತನ್ನ ವಸ್ತ್ರಭೂಷಣಾದಿಗಳನ್ನು ಕೊಟ್ಟು ಆದರಿಸಿ ಕಳುಹಿಸಿದನು.

ಮರುದಿನ ಹಳೆಯ ಬಟ್ಟೆಗೂ ಗತಿಯಿಲ್ಲದೇಹೋದ ಆ ಬ್ರಾಹ್ಮಣನು ದಿವ್ಯ ವಸ್ತ್ರಾಭರಣಗಳನ್ನೂ, ಪಟ್ಟೆಪೀತಾಂಬರಗಳನ್ನೂ ಧರಿಸಿ ರಾಜಮಾರ್ಗದಲ್ಲಿ ಹೋಗುತ್ತಿದ್ದನು. ಎಲ್ಲರೂ ಈತನ ಸಂಪನ್ನ ವೇಷವನ್ನು ನೋಡಿ ಆಶ್ಚರ್ಯಪಡುತ್ತ ಎಲ್ಲಿಯೋ ಕದ್ದಿರಬೇಕೆಂದು ಬಗೆದರು. ಭೋಜರಾಜನು ಆತನಿಗೆ ರಾತ್ರಿ ತಾನು ವಸ್ತ್ರಾಭರಣಗಳು ಕೊಟ್ಟ ಸಮಾಚಾರವನ್ನುಮರೆತು, ಅವನನ್ನು ನೋಡಿ ಎಲ್ಲರಂತೆ ತಾನೂ ಊಹಿಸಿ—“ಆಹಾ! ಈ ಬಡಬ್ರಾಹ್ಮಣನಿಗೆ ಇಂಥ ಅಮೂಲ್ಯವಾದ ವಸ್ತ್ರಾಭರಣಗಳು ಎಲ್ಲಿಂದ ಬಂದವು? ಎಂದು ಸಂಶಯಪಟ್ಟು ಆ ಬ್ರಾಹ್ಮಣನನ್ನು ರಾಜಭಟರಿಂದ ಎಳೆದುತರಿಸಿ—“ಅಹೋ ಬ್ರಾಹ್ಮಣನೆ, ನಿನಗೆ ನಿನ್ನೆನವರಿವಿಗೂ ಉಟ್ಟುಕೊಳ್ಳಲು ಹರಿದುಹೋದ

ಬಟ್ಟೆಗಳೂ ಕೂಡ ಗತಿ ಇರಲಿಲ್ಲವಲ್ಲಾ; ಇಷ್ಟರಲ್ಲಿ ಈ ಅಮೂಲ್ಯಾಭರಣಗಳು ಎಲ್ಲಿಂದ ಬಂದುವು ? ಎಂದು ಕೇಳಿದನು.

ಬ್ರಾಹ್ಮಣನು "ಅಯ್ಯೋ! ನನ್ನ ಬಾಳುವೆಯಲ್ಲಿ ಅಡಿಗಡಿಗೂ ಗಂಡಾಂತರಗಳೇ ಬರುವುವಲ್ಲಾ" ಎಂದು ಅಂದುಕೊಂಡು ಹೀಗೆ ಹೇಳಿದನು-

ವೃ|| ಭೇಕೈಃಕೋಟರಶಾಯಿಭಿರ್ಮೃತಮಿವ ಕ್ಷ್ಮಾಂತರ್ಗತಂ ಕಚ್ಛಪೈಃ |
ಪಾಠೀನೈಃ ಪೃಥು ಪಂಕಪೀಠಲುಠನಾದ್ಯಸ್ಮಿನ್ ಮುಹುರ್ಮೂರ್ಛಿತಂ ||
ತಸ್ಮಿನ್ ಶುಷ್ಕಸರಸ್ಯಕಾಲಜಲದೇನಾಗತ್ಯ ತಚ್ಚೇಷ್ಟಿತಂ |
ಯೇನಾಕುಂಭನಿಮಗ್ನವನ್ಯಕರಿಣಾಂ ಯೂಥೈಃ ಪಯಃ ಪೀಯತೇ ||

ಸೀ|| ಅಪ್ಪಕೇಳಪ್ಪ ತಟಾಕವು ಬತ್ತಲ
ಲ್ಲಿಪ್ಪರ್ ಪ್ರಾಣಿಗಳಿಗುಂಟಾದ ಗತಿಯ |
ಕಪ್ಪೆಗಳೆಲ್ಲವು ಕುಪ್ಪೆಕುಪ್ಪೆಗಳಾಗಿ
ಸಪ್ಪಳಿಲ್ಲದೆ ರಂಧ್ರದೊಳವುಗುವುವು |
ಲುಪ್ತಮಾದಾಮೆಗಳೆಲ್ಲ ಮಣ್ಣೊಳ್ ತೂರಿ
ತಪ್ಪಿಸಿಕೊಳಲಾರದಿರ್ಪವೈದೆ |
ದಪ್ಪದಪ್ಪದ ಮೀನುಗಳು ಕೆಸರೊಳು ಬಿದ್ದು
ಕುಪ್ಪಳಿಸುತೆ ಮೂರ್ಛೆಬೀಳುತಿಹವು ||

ಗೀ|| ಅಪ್ಪಿತಪ್ಪಿಯೆ ಕಾಲಮೇಘವದು ಮೂಡಿ
ಕ್ಲುಪ್ತವಿಲ್ಲದೆ ವರ್ಷವು ಸುರಿದುಸುರಿದು
ತಪ್ತಮಾದ ತಟಾಕವು ತುಂಬಿ ತುಳುಕು
ತಿರ್ಪಿನಂ ಕರಿಯೂಥವು ನೀರುಕುಡಿಗುಂ

"ಅಹೋ ! ರಾಜಮೌಳಿಯೇ, ಕೆರೆಯಲ್ಲಾ ಬತ್ತಿಹೋಗಿರಲಾಗಿ ಕಪ್ಪೆಗಳು ರಂಧ್ರದಲ್ಲಿ ಸತ್ತಂತೆ ಬಿದ್ದಿದ್ದವು. ಆಮೆಗಳು ಮಣ್ಣಿನಲ್ಲಿ ತೂರಿಕೊಂಡವು, ಮೀನುಗಳು ಕೆಸರಿನಲ್ಲಿ ಹೊರಳಿಹೊರಳಿ ಮೂರ್ಛೆಹೊಂದಿದವು, ಇಂಥಾ ಸಮಯದಲ್ಲಿ ಅಕಾಲಮೇಘವು ಹಠಾತ್ತಾಗಿ ಉದಯಿಸಿ ವರ್ಷಿಸಿದುದರಿಂದ ಈ ಒಣಗಿದ ಕೆರೆಯು ತುಂಬಿ ಅಡವಿಯ ಆನೆಗಳು ಸಹಾ ತಮ್ಮ ಕುಂಭಸ್ಥಳವನ್ನು ಮುಳುಗಿಸಿ ನೀರುಕುಡಿದುವು"

ಈ ರೀತಿಯಾಗಿ ಬ್ರಾಹ್ಮಣನು ನುಡಿಯಲು ಭೋಜರಾಜನು ತಾನು ಆತನಿಗೆ ರಾತ್ರಿ ಭೂಷಣಾದಿಗಳನ್ನು ಬಹುಮಾನಿಸಿದ ವೃತ್ತಾಂತವು ಜ್ಞಾಪಕಕ್ಕೆ ಬಂದಿತು. ಅನಂತರ ಬ್ರಾಹ್ಮಣನನ್ನು ಕೊಂಡಾಡಿ ಹೆಚ್ಚಾಗಿ ಸತ್ಕರಿಸಿ ಕಳುಹಿಸಿದನು.



## ಕಾಳಿದಾಸನೂ ಮೂಢಗುರುವೂ.

ಭೋಜರಾಜನ ಆಸ್ಥಾನದಲ್ಲಿ ವಿಷ್ಣುಶರ್ಮನೆಂಬ ಪಂಡಿತನೋರ್ವನಿದ್ದನು ಈತನು ಯಾವಾಗಲೂ ಕಾಳಿದಾಸನಮೇಲೆ ವಿರೋಧಭಾವವುಳ್ಳವನಾಗಿ, ಯಾವ ಸಮಯದಲ್ಲಾಗಲಿ, ಕಾಳಿದಾಸನಿಗವಮಾನ ಮಾಡಬೇಕೆಂದಾಲೋಚಿಸುತ್ತಿದ್ದನು ಹೀಗಿರಲು ಒಂದಾನೊಂದುದಿನ ಒಬ್ಬ ಬ್ರಾಹ್ಮಣನು ವಿಷ್ಣುಶರ್ಮನಲ್ಲಿಗೆ ಬಂದು--" ಅಯ್ಯಾ ನಾನು ಬಹಳ ದರಿದ್ರನು, ಯಾವ ವಿದ್ಯೆಯನ್ನೂ ಅರಿಯೆನು, ಆದುದರಿಂದ ನನಗೆ ಹೇಗಾದರೂ ರಾಜನ ದರ್ಶನ ಮಾಡಿಸಿ ನನ್ನ ದರಿದ್ರತೆಯನ್ನು ಹೋಗಲಾಡಿಸಿದರೆ, ಸರ್ವದಾ ನಿಮ್ಮ ಉಪಕಾರವನ್ನು ಸ್ಮರಿಸಿಕೊಳ್ಳುತ್ತೇನೆ. ಇದಕ್ಕುಪಾಯವೇನಾದರೂ ಇದ್ದರೆ ಅನುಗ್ರಹಿಸಬೇಕೆಂದು ಅತಿದೈನ್ಯದಿಂದ ಪ್ರಾರ್ಥಿಸಿಕೊಂಡನು.

ಅವನ ದೈನ್ಯೋಕ್ತಿಯನ್ನು ಕೇಳಿ ವಿಷ್ಣುಶರ್ಮನಿಗೆ ದಯಾರಸವುಂಟಾಯಿತು. " ಕಾಳಿದಾಸನಿಗವಮಾನವೂ, ಈತನಿಗೆ ಬಹುಮಾನವೂ ಉಂಟಾಗಲಿದೇ ಸಮಯವು " ಎಂದಾಲೋಚಿಸಿ, ಒಂದು ತಂತ್ರಮಾಡಿ ಆ ಬ್ರಾಹ್ಮಣನಲ್ಲಿ ಹೀಗೆ ಹೇಳಿದನು :--

" ಅಯ್ಯಾ ಬ್ರಾಹ್ಮಣಾ, ನಿನಗೆ ಯಾವ ವಿದ್ಯೆಯೂ ತಿಳಿಯದಾದುದನಿಂದ ರಾಜಸಭೆಯಲ್ಲಿ ಪಂಡಿತರ ಸಂಗಡ ವಾಕ್ಯಾರ್ಥವನ್ನುಮಾಡಿ ಗೌರವ ಹೊಂದುವುದು ಅಸಂಭವವಾದುದರಿಂದ ನಿನಗೊಂದುಪಾಯವನ್ನು ಹೇಳುತ್ತೇನೆ. ಹಾಗೆ ಮಾಡಿದರೆ ನಿನ್ನ ಕೋರಿಕೆಯು ನೆರವೇರುವುದು. ನೀನು

ಚೆನ್ನಾಗಿ ತಲೆಯನ್ನು ಬೋಳಿಸಿಕೊಂಡು ಸನ್ಯಾಸಿಯ ವೇಷವನ್ನು ಧರಿಸು. ನಿನ್ನ ಸಂಗಡ ನಾಲ್ಕೈದುಜನ ಶಿಷ್ಯರು ಬರುವಂತೆ ನಾನು ಏರ್ಪಡಿಸುತ್ತೇನೆ. ಸಮಯವನ್ನು ನೋಡಿ ನಾನು ನಿನಗೆ ಹೇಳಿ ಕಳುಹಿಸುತ್ತೇನೆ, ಆಗ ನೀನು ರಾಜಸಭೆಗೆ ಬರಬಹುದು. ಊರಿನಲ್ಲಿ ನಿನ್ನನ್ನು ಯಾರಾದರೂ ಕೇಳಿದರೆ "ಕಾಳಿದಾಸನ ಗುರುವು' ಎಂದು ಹೇಳು; ಯಾವ ಇತರ ಸಂಭಾಷಣೆಯ ನ್ನೂ ಮಾಡಬೇಡ. ಮೌನವಾಗಿರುವುದನ್ನು ಪುರಜನರು ನೋಡಿ "ಆಹಾ! ನಮ್ಮೂರಿನಲ್ಲಿರುವ ಕಾಳಿದಾಸನೇ ಮಹಾವಿದ್ವಾಂಸನಾಗಿರುವನು; ಆತನ ಗುರುವಾದ ಈ ಮಹಾನುಭಾವನು ಇನ್ನೆಂಥ ವಿದ್ವಾಂಸನೋ!" ಎಂದು ನಿನ್ನನ್ನು ಗೌರವಿಸುವರು. ಭೋಜರಾಜನೂ ಸಹಾ ನಿನ್ನ ವಿದ್ಯೆಯನ್ನು ಪರೀಕ್ಷಿಸದೆ ಬಹುಮಾನಮಾಡಿ ಕಳುಹಿಸುವನು" ಎಂದು ಮೊದಲಾಗಿ ಅವನ ಮನವೊಪ್ಪುವಂತೆ ಬೋಧಿಸಿದನು.

ಈ ಮಾತುಗಳನ್ನು ಕೇಳಿ ಆ ಹುಚ್ಚ ಬ್ರಾಹ್ಮಣನು ಅವನ ಕುಯುಕ್ತಿಗೆ ಮೆಚ್ಚಿ ಭುಜಗಳನ್ನು ತಟ್ಟಿಕೊಂಡು ಸಂತೋಷಿಸುತ್ತ ಕಾವಿಯವಸ್ತ್ರ ಮೊದ ಲಾದ ಸನ್ಯಾಸಿಯ ಚಿಹ್ನೆಗಳನ್ನು ಧರಿಸಿ, ದೊಡ್ಡ ಯೋಗೀಶ್ವರನಂತೆ ವಿಷ್ಣು ಶರ್ಮನು ಕಳುಹಿಸಿದ ನಾಲ್ಕುಜನ ಶಿಷ್ಯರನ್ನು ಹಿಂದಿಟ್ಟುಕೊಂಡು ರಾಜ ಬೀದಿಯ ಮುಂಭಾಗದಲ್ಲಿ ಒಂದು ಸಲ ಕೊನೆಯವರೆವಿಗೂ ಹೋಗಿಬಂದು ನಾಲ್ಕು ಮಾರ್ಗಗಳು ಸೇರುವ ಚೌಕದಲ್ಲಿ ಕುಳಿತುಕೊಂಡಿದ್ದನು. ಬೀದಿ ಯಲ್ಲಿ ತಿರುಗಾಡುವ ಮನುಷ್ಯರು ಪರಮಾಶ್ಚರ್ಯವುಳ್ಳವರಾಗಿ ನೋಡುತ್ತ ಇವ ರಾರೆಂದು ಆತನ ಶಿಷ್ಯರನ್ನು ಕೇಳಲು ಅವರು—"ಈ ಮಹಾತ್ಮರು ಕಾಳಿ ದಾಸನ ಗುರುಗಳು" ಎಂದು ಹೇಳುತ್ತಿದ್ದರು.

ಈ ಸಮಾಚಾರವು ನಗರವಲ್ಲೆಲ್ಲಾ ಹಬ್ಬಿ—'ಅಬ್ಬಾ, ಕಾಳಿದಾಸನ ಗುರುಗಳು—ಆಹಾ! ದೊಡ್ಡವರು' ಎಂದು ಗುಂಪುಗುಂಪಾಗಿ ಬಂದು ನೋಡಿ ನಮಸ್ಕರಿಸಿ ಹೋಗುತ್ತಿದ್ದರು. ಈ ಕಪಟ ಸನ್ಯಾಸಿಯು ಕಣ್ಣುಗಳನ್ನು ಮುಚ್ಚುತ್ತ ತೆರೆಯುತ್ತ ಬಾಯಿಬಿಡದೆ ಮಹಾ ಮೌನಿಯಂತೆ ಮಾಸವಾಗಿ ದ್ದನು. ಆ ಚೌಕಿಗೆ ಸಮೀಪದಲ್ಲಿಯೇ ಮಲಗುವ ಮನೆಯನ್ನು ಮಾಡಿ ಕೊಂಡಿದ್ದನು. ಈ ಸಮಾಚಾರವು ಕಾಳಿದಾಸನಿಗೆ ತಿಳಿಯಿತು. ಇದು ವಿಷ್ಣು

ಶರ್ಮನು ಮಾಡಿದ ಕೃತ್ರಿಮವಾಗಿರಬಹುದೆಂದು ಊಹಿಸಿ, “ ಆಗಲಿ, ಮಾಡ ಬೇಕಾದುದನ್ನು ಮಾಡೋಣ ” ಎಂದಾಲೋಚಿಸಿದನು.

ಇಷ್ಟರಲ್ಲಿ ಸನ್ಯಾಸಿಯ ಆಗಮನವು ಭೋಜನಿಗೆ ತಿಳಿದು ಕಾಳಿದಾಸ ನನ್ನು ನೋಡಿ—‘ ಕವೀಶ್ವರಾ, ನಿಮ್ಮ ಗುರುಗಳು ಇಲ್ಲಿಗೆ ದಯಮಾಡಿಸಿರು ವರೆಂದು ಎಲ್ಲರೂ ಅಂದುಕೊಳ್ಳುವುರು, ನೀನು ನೋಡಿದೆಯಾ ? ಎಂದು ಕೇಳಿ ದನು. ಕಾಳಿದಾಸನು ಕಾಲೋಚಿತವಾಗಿ “ ನಾನೂ ದರ್ಶನಮಾಡಿಕೊಳ್ಳ ಬೇಕೆಂದು ಯೋಚಿಸಿದ್ದೇನೆ ” ಎಂದು ಸಮಾಧಾನ ಹೇಳಿ ಆ ರಾತ್ರಿ ಕಪಟ ಸನ್ಯಾಸಿಯ ಹತ್ತಿರಕ್ಕೆ ಬಂದನು. ಆತನ ಶಿಷ್ಯರು ಕಾಳಿದಾಸನನ್ನು ನೋಡಿ ದವರಾದುದರಿಂದ ಗುರುಗಳು ಅನುಷ್ಠಾನದಲ್ಲಿರುವರೆಂದೂ, ದೇವತಾರ್ಚನ ಮಾಡುತ್ತಿರುವರೆಂದೂ ನೆಪ ಹೇಳಿ ಆತನನ್ನು ಕಾಳಿದಾಸನಿಗೆ ತೋರಿಸದೆ ಇದ್ದರು. ಕಾಳಿದಾಸನು ಹೇಗಾದರೂ ಆತನನ್ನು ಕಾಣಬೇಕೆಂದು ಪಟ್ಟು ಹಿಡಿದು ಕೆಲವುಕಾಲಕಾದಿದ್ದು ಕೊನೆಗೆ ಆತನನ್ನು ನೋಡಿ ಹೀಗೆ ನುಡಿದನು—

“ ಅಯ್ಯೋ ಬ್ರಾಹ್ಮಣನೇ ! ಕಾಳಿದಾಸನಿಗೆ ಗುರುವೆಂದು ಹೇಳಿಕೊ ಳ್ಳುತ್ತ ಇಲ್ಲಿ ಕಳ್ಳವೇಷವನ್ನು ಹಾಕಿಕೊಂಡು ಕುಳಿತಿರುವೆ, ಇದರಿಂದ ನಿನಗೆ ಲಾಭವೇನು ? ಹೀಗೆ ಮಾಡಿದರೆ ಕಾಳಿದಾಸನಿಂದಾಗಲಿ, ಇತರರಿಂದಾಗಲಿ ಭಯವಿಲ್ಲವೇ ? ಎನ್ನುತ್ತ ಆತನಿಗೆದುರಾಗಿ ಕಾಳಿದಾಸನು ಕುಳಿತುಕೊಂಡನು.

ಆ ಬ್ರಾಹ್ಮಣನು ತನಗೆದುರಾಗಿ ಕುಳಿತಿರುವಾತನೇ ಕಾಳಿದಾಸನೆಂದ ರಿತು ಏನು ಮಾಡುವನೋ ಎಂಬ ಭಯದಿಂದ ತತ್ತರಪಡುತ್ತ ಎದ್ದು ಕೈ ಜೋಡಿಸಿಕೊಂಡು ನಮಸ್ಕರಿಸಿ—“ ಸ್ವಾಮಿ. ನನಗೇನೂ ತಿಳಿಯದು, ವಿಷ್ಣುಶರ್ಮನು ನನಗೀ ವೇಷವನ್ನು ಹಾಕಿಸಿ ಇಲ್ಲಿ ಕುಳ್ಳಿರಿಸಿದನು. ಆದುದ ರಿಂದ ನನ್ನ ಅಪರಾಧವನ್ನು ಕ್ಷಮಿಸಬೇಕು. ನಾನು ಉದರಪೋಷಣೆ ಮಾ ಡಿಕೊಳ್ಳಲಾರದೆ “ ಭೋಜರಾಜನ ದರ್ಶನ ಮಾಡಿಸಿ ಸ್ವಲ್ಪ ದ್ರವ್ಯಸಹಾಯ ಮಾಡಿಸಿಕೊಡಿ ” ಎಂದು ವಿಷ್ಣುಶರ್ಮನನ್ನು ಬೇಡಿಕೊಳ್ಳಲು ಆತನೀರೀತಿ ಮಾಡಿದನು. ಇದು ನಿಜವಾದ ವೃತ್ತಾಂತವೆಂದು ಸವಿನಯವಾಗಿ ಬಿನ್ನೈ ಸಿದನು.

ಆ ಬ್ರಾಹ್ಮಣನ ದೈನ್ಯವನ್ನು ನೋಡಿ ಕಾಳಿದಾಸನು ದಯಾರಸಪೂರಿತನಾಗಿ “ ಅಯ್ಯೋ ! ಬ್ರಾಹ್ಮಣಾ, ಧನವನ್ನುಪಾರ್ಜಿಸಲು ಎಷ್ಟು ಉಪಾಯಗಳನ್ನಾದರೂ ಮಾಡಬಹುದು; ಆ ವಿಷಯದಲ್ಲಿ ನನಗೇನೂ ಕೋಪವಿಲ್ಲ; ನಿಮ್ಮಂತಹ ದರಿದ್ರ ಬ್ರಾಹ್ಮಣರಿಗೆ ಶಕ್ತ್ಯನುಸಾರ ಧನ ಪ್ರಾಪ್ತಿಯಾಗುವಂತೆ ಮಾಡುವುದು ನಮ್ಮಂಥವರಿಗೆ ಮುಖ್ಯ ಕರ್ತವ್ಯವು. ಆದುದರಿಂದ ನಿನಗೆದ್ರವ್ಯ ಲಾಭ ಉಂಟಾದರೆ ನನಗೆ ಸಂತೋಷವೇ. ನಾವಷ್ಟಾಗಿ ನಿಮಗೆ ಧನ ಸಹಾಯ ಮಾಡಲಾಗದಿದ್ದರೂ ಒಂದುಮಾತನ್ನು ಹೇಳುವೆನು ಕೇಳು. ನೀನು ಕಾಳಿದಾಸನ ಗುರುವೆಂದು ದೊರೆಗೆ ಆಗಲೇ ತಿಳಿದಿರುವುದು. ತಪ್ಪದೆ ನಿನ್ನನ್ನು ಸಭೆಗೆ ಕರೆಸಿಕೊಳ್ಳುವನು. ಆಗ ನಿನ್ನನ್ನು ಪ್ರಶ್ನೆಮಾಡದೆಯೇ ಬಹುಮಾನಿಸಿ ಕಳುಹಿಸಿದರೆ ಸಂತೋಷ; ಹಾಗಲ್ಲದೆ ಯಾವುದಾದರೂ ಪ್ರಶ್ನೆಮಾಡಿದರೆ ನನ್ನನ್ನು ತೋರಿಸಿಬಿಡು. ನಾನು ತಕ್ಕ ಸಮಾಧಾನವನ್ನು ಕೊಟ್ಟು ನಿನಗೆ ಮರ್ಯಾದೆಯನ್ನು ಕೊಡಿಸುವೆನು. ಹೇಗಾದರೂ ನನ್ನ ಗುರುವೆಂದು ಹೇಳಿಕೊಂಡ ನಿನಗೆ ಬಹುಮಾನ ದೊರೆಯುವುದೇ ಯೋಗ್ಯ. ಅಪಕಾರಕ್ಕುಪಕಾರವನ್ನು ಮಾಡುವುದು ಸಜ್ಜನರ ಧರ್ಮವು. ನನ್ನನ್ನು ಪರಾಜಿತನಾಗಿ ಮಾಡಬೇಕೆಂಬ ಶತ್ರುಗಳಿಗೆ ಶಿಕ್ಷೆಯಾಗಿ ಅವರಿಗೇ ನಾಚಿಕೆಯುಂಟಾಗಬೇಕು ” ಎಂದು ಹೇಳಿ ಕಾಳಿದಾಸನು ಹೊರಟುಹೋದನು.

ಮರುದಿನ ಭೋಜರಾಜನು ಕಾಳಿದಾಸನ ಗುರುವನ್ನು ಸಗೌರವವಾಗಿ ಕರೆದುಕೊಂಡುಬರಲು ಪಾಲಕಿಯನ್ನು ಕಳುಹಿಸಿದನು. ಗುರುಗಳೂ ಮತ್ತು ನಾಲ್ಕುಜನ ಶಿಷ್ಯರೂ ಮಹಾ ವೈಭವದಿಂದ ಪುರಪರಿಜನಗಳೆಲ್ಲರೂ ನೋಡುತ್ತಿರಲಾಗಿ ತಾಳಮೇಳಾದಿಗಳೊಡನೆ ಮೆರವಣಿಗೆಯಿಂದ ಭೋಜರಾಜನ ಆಸ್ಥಾನಕ್ಕೆ ಆಗಮಿಸಿದರು.

ಭೋಜನು ಅತಿ ಭಯಭಕ್ತಿಗಳೊಡನೆ ಗುರುಗಳನ್ನು ಇದಿರ್ಗೊಂಡು ಕರೆದುಕೊಂಡು ಬಂದು ಉಚಿತಾಸನದಲ್ಲಿ ಕುಳ್ಳಿರಿಸಿದನು. ಸಭಾಸದರೆಲ್ಲರೂ ‘ ಇವರು ಕಾಳಿದಾಸನ ಗುರುಗಳೇ ? ’ ಎಂದು ಅತ್ಯಾಶ್ಚರ್ಯದಿಂದ ಬಾಯಿಬಿಟ್ಟುಕೊಂಡು ನೋಡುತ್ತಿದ್ದರು. ಆಗ ಭೋಜರಾಜನು ಕಾಳಿದಾಸನನ್ನು ನೋಡಿ— “ ಕಾಳಿದಾಸಾ, ನಿಮ್ಮ ಗುರುಗಳಲ್ಲಿ ಕೊಂಚ ವಿಜ್ಞಾಪಿಸಿಕೊಳ್ಳುವ ಕೋರಿಕೆ

ಇರುವುದು ” ಎಂದು ಕೇಳಿದನು. ‘ ಹಾಗೆಯೇ ಆಗಬಹುದು, ಎಲ್ಲಾ ವಿಷಯದಲ್ಲೂ ಅವರು ಸಮರ್ಥರು ’ ಎಂದು ಕಾಳಿದಾಸನು ಹೇಳಿದನು.

ಭೋಜರಾಜನು ಗುರುಗಳನ್ನು ನೋಡಿ ಸವಿನಯದಿಂದ—“ಮಹಾನುಭಾವನೇ, ನೀನು ಸರ್ವಜ್ಞನು, ನಿನ್ನ ಸನ್ನಿಧಿಯಲ್ಲಿ ನಾನು ಮಾಡುವ ಪ್ರಶ್ನೆಯು ಕೇವಲ ಅತ್ಯಲ್ಪವಾದುದಾದರೂ ದಯಮಾಡಿ ಕ್ಷಮಿಸಬೇಕು. ಲಂಕಾಧಿಪತಿಯಾದ ದಶಾನನ ‘ ರಾವಣ ’ ಶಬ್ದಕ್ಕೆ ಕೆಲವರು ವಿಶ್ರವಸುವಿನ ಕುಮಾರನಾದುದರಿಂದ ವಿಶ್ರವಶ್ಶಬ್ದದ ಪುತ್ರನೆಂಬರ್ಥಕ್ಕೆ ರವಣಾದೇಶವು ಬಂದು ‘ ರಾವಣ ’ ಆಯಿತೆಂದೂ, ಕೆಲವರು ಕೈಲಾಸ ಪರ್ವತವನ್ನೆತ್ತಿದಾಗ ಶಿವನು ಹೆಬ್ಬೆರಳಿನಿಂದ ಹಿಡಿದೊತ್ತಲು ಆಗ ಅತ್ತನಾದುದರಿಂದ ‘ ರಾವಣ ’ ಎಂದಾಯಿತೆಂದೂ ವ್ಯುಎರಡು ತ್ಪತ್ತಿಯನ್ನು ಹೇಳುವರು. ಇವುಗಳಲ್ಲಿ ಯಾವುದು ಸರಿಯೋ ಅಪ್ಪಣೆ ಕೊಡಿನಬೇಕಾಗಿ ಪ್ರಾರ್ಥಿಸುತ್ತೇನೆ” ಎಂದನು.

ಹೀಗೆ ಭೋಜರಾಜನು ಕೇಳಿದ ಪ್ರಶ್ನೆಗೆ ಸಭೆಯೆಲ್ಲ ನಿಶ್ಶಬ್ದವುಳ್ಳುದಾಯಿತು. ರಾಜನು ಗುರುಮುಖದಿಂದ ಈ ಸಂಶಯವನ್ನು ನಿವೃತ್ತಿಮಾಡಿಕೊಳ್ಳಬೇಕೆಂದು ಏಕಾಗ್ರಚಿತ್ತನಾಗಿದ್ದನು. ಈ ಮೂಢ ಬ್ರಾಹ್ಮಣನು ಏನು ಹೇಳಬಲ್ಲನು ? ಏನೂ ತೋಚದೆ ಸ್ವಲ್ಪ ಸುಮ್ಮನಿದ್ದು ‘ ಆ ರಾಭಣನೇ ’ ಎಂದು ನುಡಿದನು.

ಅದನ್ನು ಕೇಳಿ ಸಭೆಯವರೆಲ್ಲಾ ಆಶ್ಚರ್ಯಪಟ್ಟರು. “ಸ್ವಾಮೀ, ಎಲ್ಲರೂ ರಾವಣನೆಂದಲ್ಲವೇ ಹೇಳುವುದು ? ‘ ರಾಭಣ ’ನು ಹೇಗಾಗುವನು ? ” ಎಂದು ಭೋಜರಾಜನು ಕೇಳಿದನು. ಆ ಬ್ರಾಹ್ಮಣನು ತತ್ತರಗೊಳ್ಳುತ್ತ ಧೈರ್ಯವನ್ನು ಹೊಂದಿ, ಭಯ ವಿಕಾರ ಯಾವುದನ್ನೂ ತೋರಿಸದೆ—‘ ನನ್ನ ಶಿಷ್ಯ ಕಾಳಿದಾಸನಿರುವನು, ಅವನನ್ನು ಕೇಳಿ, ಎಂದು ಹೇಳಿದನು. ತರುವಾಯ ಕಾಳಿದಾಸನನ್ನು ಕೇಳಲು ಹೀಗೆ ಹೇಳಿದನು :—

ಶ್ಲೋ॥ “ ಭಕಾರಃ ಕುಂಭಕರ್ಣೇಚ ಭಕಾರಶ್ಚ ವಿಭೀಷಣೇ ।
ತಯೋರ್ಜ್ಯೇಷ್ಠೇ ಕುಲಶ್ರೇಷ್ಠೇ ಭಕಾರಃ ಕಿಂ ನವಿದ್ಯತೇ ” ॥

ಕಂ|| ಅರಿಯಲ್ ಭಕಾರಮಿಹುದಾ |
ಗಿರಿಸಮನಹ ಕುಂಭಕರ್ನನೆಂಬಾ ಪೆಸರೊಳ್ ||
ನೆರೆಯಾ ವಿಭೀಷಣನೊಳುಂ |
ಹಿರಿಯಣ್ಣನೊಳಾ ಭಕಾರಮಿರ್ಪುದು ಪಿರಿದೇಂ!

"ಕುಂಭಕರ್ಣನ ಹೆಸರಿನಲ್ಲಿ 'ಭ'ಕಾರವಿರುವುದು ಹಾಗೆಯೇ ವಿಭೀಷಣನ ಹೆಸರಿನಲ್ಲಿಯೂ 'ಭ'ಕಾರವಿರುವುದು ಈ ಇಬ್ಬರಿಗಿಂತಲೂ ದೊಡ್ಡವನಾದ ರಾವಣನ ಹೆಸರಿನಲ್ಲಿ ಭಕಾರ ವೇತಕ್ಕಿರಬಾರದು!"

ಹೀಗೆ ಕಾಳಿದಾಸನು ನುಡಿದ ಸಮಾಧಾನವನ್ನು ಭೋಜರಾಜನು ಕೇಳಿ ಸಂತೋಷಗೊಂಡು ಆತನ ಗುರುವನ್ನು ವಿಶೇಷ ಗೌರವಿಸಿ ಲಕ್ಷರೂಪಾಯಿಗಳನ್ನು ಕೊಟ್ಟು ಕಳುಹಿಸಿದನು. ಕಾಳಿದಾಸನ ಮಹಾನುಭಾವತ್ವವನ್ನೂ ಯುಕ್ತಿಯನ್ನೂ, ನೋಡಿ ವಿಷ್ಣುಶರ್ಮನು ಲಜ್ಜಿತನಾಗಿ ತಲೆಯನ್ನು ಬಗ್ಗಿಸಿಕೊಂಡನು.



## ಪತಿವ್ರತೆ.

ಪೂರ್ವಕಾಲದ ರಾಜರು ಪ್ರಜೆಗಳ ಸುಖದುಃಖಗಳನ್ನು ತಾವೇ ರೂಪಾಂತರದಿಂದ ಗೋಪ್ಯವಾಗಿ ಪಟ್ಟಣವನ್ನು ಪ್ರವೇಶಿಸಿ ಆಯಾ ಸ್ಥಳದ ವಿದ್ಯಮಾನಗಳನ್ನೂ, ವಿಶೇಷಾಂಶಗಳನ್ನೂ ಪ್ರತ್ಯಕ್ಷನೋಡಿ ತಿಳಿದುಕೊಳ್ಳುವ ಸಂಪ್ರದಾಯವುಳ್ಳವರಾಗಿದ್ದರು. ಈ ಪದ್ಧತಿಯ ಮೇರೆಗೆ ಒಂದು ದಿನ ಭೋಜರಾಜನು ರಾತ್ರಿವೇಳೆಯಲ್ಲಿ ಬೇರೆ ವೇಷವನ್ನು ಧರಿಸಿ ಪಟ್ಟಣದಲ್ಲಿ ತಿರುಗುತ್ತ ಒಬ್ಬ ಬ್ರಾಹ್ಮಣನ ಗೃಹವನ್ನು ಪ್ರವೇಶಿಸಿ ಬಾಗಿಲಮರೆಯಲ್ಲಿ ಅಡಗಿಕೊಂಡು ಅಲ್ಲಿ ನಡೆಯುವ ಚಮತ್ಕಾರವನ್ನು ನೋಡುತ್ತಿದ್ದನು.

ಆ ಗೃಹದಲ್ಲಿ ದಂಪತಿಗಳಿಬ್ಬರೂ, ಎರಡು ವರ್ಷದ ಓರ್ವ ಬಾಲನೂ ಇದ್ದರು. ಬ್ರಾಹ್ಮಣನು ದರಿದ್ರನಾದರೂ ವೇದಾಧ್ಯಯನ ಸಂಪನ್ನನಾಗಿ

ವೈದಿಕ ವೃತ್ತಿಯಿಂದ ಆ ಪಟ್ಟಣದಲ್ಲಿ ಜೀವಿಸುತ್ತ ಆಚಾರಮಾರ್ಗವನ್ನು ತಪ್ಪದೆ ನಿರಂತರದಲ್ಲೂ ಧ್ಯಾನಾಗ್ನಿಹೋತ್ರವುಳ್ಳವನಾಗಿದ್ದನು. ಈತನ ಹೆಂಡತಿಯ ಪರಮ ಪತಿವ್ರತಾಶಿರೋಮಣಿಯಾಗಿದ್ದಳು. ಹೀಗೆ ಅನುಕೂಲ ದಾಂಪತ್ಯ ಉಂಟಾಗಿ ಲಕ್ಷ್ಮೀನಾರಾಯಣರಂತೆಯೂ, ಪಾರ್ವತೀಪರಮೇಶ್ವರರಂತೆಯೂ ಸಂಸಾರ ಮಾಡಿಕೊಂಡಿದ್ದರು

ಆ ಬ್ರಾಹ್ಮಣನು ಆ ದಿನ ಹಗಲೆಲ್ಲ ಯಾವುದೋ ಕಾರ್ಯವಶದಿಂದ ಶ್ರಮವನ್ನು ಹೊಂದಿ ವಿಶ್ರಾಂತಿಗಾಗಿ ತನ್ನ ಹೆಂಡತಿಯ ತೊಡೆಯಮೇಲೆ ತಲೆಯನ್ನಿಟ್ಟುಕೊಂಡು ಮಲಗಿ ನಿದ್ರಿಸುತ್ತಿದ್ದನು. ಅಲ್ಲಿಗೆ ಅತಿ ಸಮೀಪದಲ್ಲಿ ಅಗ್ನಿಕುಂಡವು ಪ್ರಜ್ವಲಿಸುತ್ತಿದ್ದಿತು. ಮಗುವು ಅಜ್ಞಾನದಿಂದ ಸುಡುವುದೆಂಬ ಭೀತಿಯಿಲ್ಲದೆ ಅಂಬೆಗಾಲನ್ನು ಇಟ್ಟುಕೊಂಡು ಆಡುತ್ತ ಆ ಬೆಂಕಿಯ ಸಮೀಪಕ್ಕೆ ಹೋಗಿ ಅಗ್ನಿಕುಂಡದಲ್ಲಿ ಬಿದ್ದುಬಿಟ್ಟಿತು ಆಗಲಾ ಪತಿವ್ರತೆಯು ಬೆಂಕಿಯಲ್ಲಿ ಬಿದ್ದ ಬಾಲನನ್ನು ನೋಡುತ್ತಿದ್ದರೂ ತಾನು ಆ ಸಮಯದಲ್ಲ ಮೇಲಕ್ಕೆದ್ದರೆ ತನ್ನ ಪತಿಯ ನಿದ್ರಾಭಂಗವಾಗುವುದೆಂದು ಭಾವಿಸಿ, ಮನಸ್ಸಿನಲ್ಲಿಯೇ ಅಗ್ನಿದೇವನನ್ನು ಧ್ಯಾನಿಸುತ್ತ ಪತಿಭಕ್ತಿ ಪಾರಾಯಣಳಾಗಿದ್ದಳು. ಆಕೆಯ ಪಾತಿವ್ರತ್ಯ ಪ್ರಭಾವದಿಂದ ಬಾಲಕನಿಗೆ ಸ್ವಲ್ಪವೂ ಬಾಧೆಯಾಗದೆ ಅಗ್ನಿಯಲ್ಲಿಬಿದ್ದರೂ ಪುಷ್ಪರಾಶಿಯಲ್ಲಿ ಅಡಗಿಕೊಳ್ಳುವಂತೆ ಆಡಿಕೊಳ್ಳುತ್ತಿದ್ದನು. ಭೋಜರಾಜನು ಈ ವಿಚಿತ್ರವನ್ನು ನೋಡಿ ಅತ್ಯಾಶ್ಚರ್ಯ ಚಕಿತನಾಗಿ ಆ ಪತಿವ್ರತಾತಿಲಕವನ್ನು ಮನಸಾ ವಂದಿಸಿ ಗೃಹವನ್ನು ಸೇರಿ ಮರುದಿನ ಸಭೆಗೆ ಬಂದು ಆಸ್ಥಾನ ಕವಿಗಳಲ್ಲಿ ಹೀಗೆ ಹೇಳಿದನು.

**“ ಹುತಾಶನಶ್ಚಂದನಪಂಕಶೀತಲಃ ”**
**“ ಅಗ್ನಿಯು ಚಂದನದಂತೆ ತಂಪಾದನು ”**

ಈ ಪ್ರಶ್ನೆಯನ್ನು ಕೇಳಿ ಪಂಡಿತರು ಪ್ರತ್ಯುತ್ತರವನ್ನು ಕೊಡಲಾರದೆ ಡೋಲಾಯಮಾನಮಾನಸರಾಗಿದ್ದರು. ಆಗ ಕಾಳಿದಾಸನು ಭೋಜರಾಜನ ಅಭಿಪ್ರಾಯವನ್ನು ತಿಳಿದುಕೊಂಡು ಮಿಕ್ಕ ಮೂರು ಪಾದಗಳನ್ನು ಹೀಗೆ ಪೂರ್ತಿಮಾಡಿದನು.

ಶ್ಲೋ|| “ ಸುತಂ ಪತಂತಂ ಪ್ರಸಮೀಕ್ಷ್ಯ ಪಾವಕೇ |
ನಬೋಧಯಾಮಾಸ ಪತಿಂ ಪತಿವ್ರತಾ ||
ಪತಿವ್ರತಾಶಾಪಭಯೇನ ಪೀಡಿತೋ |
ಹುತಾನಶ್ಚಂದನಪಂಕಶೀತಲಃ ” ||

ಕಂ|| ಸುತನಗ್ನಿಯೊಳುರುಳುವುದಂ |
ಪತಿಸೇವಾನಿರತಳಾದ ಸತಿಯೀಕ್ಷಿಸುತಂ ||
ವ್ಯಥೆಗೊಳದಿರೆ ಶಪಿಸುವಳೆಂ |
ದತಿ ಭೀತಿಯೊಳಗ್ನಿ ಶೀತಲಂತಾನಾದಂ ||

“ ಒಬ್ಬ ಪತಿವ್ರತೆಯು ತನ್ನ ಮಗನು ಅಗ್ನಿಯಲ್ಲಿ ಬೀಳುವುದನ್ನು ನೋಡಿಯೂ ಮಗುವನ್ನು ಎತ್ತುವುದಕ್ಕೆ ಹೋಗದೆ ತೊಡೆಯಮೇಲೆ ಮಲಗಿದ್ದ ಪ್ರಿಯನ ನಿದ್ರಾಭಂಗವಾಗಿ ಪಾತಿವ್ರತ್ಯಕ್ಕೆ ಕುಂದುಬರುವುದೆಂದು ಮೇಲಕ್ಕೆದ್ದು ಬಾಲನನ್ನು ಎತ್ತಲಿಲ್ಲ ಆ ಪತಿವ್ರತೆಯು ಶಪಿಸುವಳೆಂಬ ಭಯದಿಂದ ಅಗ್ನಿಯು ಚಂದನದಂತೆ ತಣ್ಣಗಾದನು ”

ಹೀಗೆ ಕಾಳಿದಾಸನು ಹೇಳಲಾಗಿ ಕೇಳಿದವರೆಲ್ಲಆಶ್ಚರ್ಯಪಟ್ಟರು. ಭೋಜರಾಜನು ವಿಸ್ಮಿತನಾಗಿ–‘ ಆಹಾ! ಈ ಚಮತ್ಕಾರವನ್ನು ಎಂದಿಗಾದರೂ ಕಂಡು ಕೇಳಿದುದುಂಟೇ ? ಆ ಸಮಯದಲ್ಲಿ ನಾನು ವಿನಾ ಇತರರೊಬ್ಬರೂ ಇರಲಿಲ್ಲವಲ್ಲಾ ! ಈ ಕವಿಗೆ ಆ ಸಮಾಚಾರವು ಹೇಗೆ ತಿಳಿಯಿತು ? ಈತನಿಗೆ ಯಾವುದೋ ಮಂತ್ರಸಿದ್ಧಿ ಇರಬೇಕು ’ ಎಂದಾಲೋಚಿಸಿ ಕಾಳಿದಾಸನನ್ನು ಬಹಳವಾಗಿ ಸನ್ಮಾನಿಸಿ, ಸಭೆಯನ್ನು ವಿಸರ್ಜಿಸಿ ಅಂತಃಪುರಕ್ಕೆ ಹೊರಟುಹೋದನು.



## ಕಾಳಿದಾಸನೂ, ಮೀನುಗಳೂ

ಮಹಾ ಕವಿಯಾದ ಕಾಳಿದಾಸನು ತನ್ನ ಕವಿತಾಚಮತ್ಕಾರದಿಂದ ನಿರಂತರವೂ ಭೋಜರಾಜನನ್ನು ಮೆಚ್ಚಿಸಿ, ದೊರೆಯ ಅರ್ಧಾಸನವನ್ನು ಅಲಂಕರಿಸುತ್ತಿದ್ದನು.

ಈತನಿಗೆ ಇಂತಹ ಗೌರವವು ಲಭಿಸಿದುದರಿಂದ ಭಟ್ಟ, ಬಾಣ, ಶಂಕರ ಮೊದಲಾದ ಕವಿಗಳು ಅಸೂಯೆಗೊಂಡು, ರಾಜನಿಗೆ ಆತನಲ್ಲಿರುವ ಗುರುಭಾವವನ್ನು ತೊಲಗಿಸಬೇಕೆಂದಾಲೋಚಿಸಿ, ಕಾಳಿದಾಸನಿಲ್ಲದ ಸಮಯದಲ್ಲಿ ಭೋಜರಾಜನಲ್ಲಿಗೆ ಹೋಗಿ--' ರಾಜೇಂದ್ರಾ, ಕಾಳಿದಾಸನು ವೇಶ್ಯಾಲಂಪಟಿಯಾಗಿರುವುದೆಲ್ಲರಿಗೂ ತಿಳಿದ ಅಂಶವೇ ಅಲ್ಲವೆ ? ಇಷ್ಟೇ ಅಲ್ಲ, ಬ್ರಾಹ್ಮಣನಾಗಿದ್ದು ಸ್ವಲ್ಪವಾದರೂ ಸಂಶಯಪಡದೆ ಮೀನುಗಳನ್ನು ಸಹ ಭಕ್ಷಿಸುತ್ತಿರುವನು ಪ್ರತಿ ದಿನವೂ ಕಟುಕರ ಅಂಗಡಿಯ ಬೀದಿಯಲ್ಲಿ ತೆಗೆದುಕೊಂಡು ಹೋಗುವುದನ್ನು ನಾವೆಲ್ಲರೂ ನೋಡುತ್ತಲೇ ಇದ್ದೇವೆ ಅಗ್ರಜನ್ಮನೆಂದು ಹೇಳುತ್ತಲಿದ್ದು ಅಭಕ್ಷ್ಯಭಕ್ಷಣ, ಅಗಮ್ಯಾಗಮನ, ಇನ್ನೂ ಅಪಾನಪೇಯ ಈ ಪಾಪಕಾರ್ಯಗಳನ್ನು ಮಾಡುವುದು ಪೂರ್ವಜನ್ಮ (ಕುರುಬ) ವಾಸನೆಯಾಗಿರಬಹುದು ಮಹಾಸ್ವಾಮಿಯವರ ಆಸ್ಥಾನ ಕವೀಂದ್ರನಾಗಿ ಮೀನುಗಳನ್ನು ತಿನ್ನುವುದೆಂದರೆ ಅಗೌರವವಲ್ಲವೇ ಪ್ರಭೂ ? ಎಂದು ಹೇಳಿದರು

ಭೋಜರಾಜನು ಮನಸ್ಸಿನಲ್ಲಿ ಆಲೋಚಿಸಿ, ಇವರೆಲ್ಲರೂ ಆತನಲ್ಲಿ ಅಸೂಯಾಪರರಾಗಿರುವರೆಂದು ತಿಳಿದರೂ ಅವರು ಮನಸ್ಸಿನಲ್ಲಿ ಪರ್ಯಾಯವಾಗಿ ಭಾವಿಸದಂತೆ ಆ ಭಟ್ಟ-ಬಾಣಾದಿಗಳನ್ನು ಕುರಿತು " ಅಹೋ ಪಂಡಿತರೇ ಕಾಳಿದಾಸನು ಮೀನುಗಳನ್ನು ತಿನ್ನುವನೆಂಬ ವಾರ್ತೆಯು ಅತಿ ವಿಚಿತ್ರವಾಗಿರುವುದು. ನಿಜವಾಗಿರುವ ಪಕ್ಷದಲ್ಲಿ ಆತನು ಮೀನುಗಳನ್ನು ತೆಗೆದುಕೊಂಡು ಹೋಗುವಾಗ ನತ್ವರವಾಗಿ ನಾನು ಬರಹೇಳಿದೆನೆಂದು ಬಿಡದೆ ಕರೆದುಕೊಂಡು ಬನ್ನಿ ಅದಕ್ಕೆ ತಕ್ಕ ಪ್ರತೀಕಾರವನ್ನು ಮಾಡುತ್ತೇನೆ " ಎಂದು ಹೇಳಿ ಕಳುಹಿಸಿದನು

ಅವರು ತಾವು ಹೇಳಿದ ಅಸತ್ಯವನ್ನು ಸತ್ಯವಾಗಿ ತೋರಿಸಲಾರದೆ ಮರುದಿನ ಸಭೆಗೆ ಬರುವುದನ್ನೇ ಬಿಟ್ಟರು. ಕಾಳಿದಾಸನು ಇದನ್ನು ತಿಳಿದು, ಅವರ ಇಷ್ಟಪ್ರಕಾರವೇ ಮಾಡಬೇಕೆಂದು ಒಂದು ದಿನ ಅವರೆಲ್ಲರೂ ನೋಡುವಹಾಗೆ ಕಟುಕರ ಅಂಗಡಿಗೆ ಹೋಗಿ, ಮೀನನ್ನು ತೆಗೆದುಕೊಂಡು ಕಂತೆಯಾಗಿ ಕಟ್ಟಿ ಕುಂಕುಳಲ್ಲಿ ಇಟ್ಟುಕೊಂಡು ಹೋಗುತ್ತಿದ್ದನು.

ಬಾಣ, ಭಟ್ಟ ಮೊದಲಾದವರು ಇದನ್ನು ನೋಡಿ ಒಳ್ಳೆಯ ಸಮಯವು ದೊರಕಿತೆಂದು ಸಂತೋಷಿಸಿ, ಆತನಿಗೆದುರಾಗಿ ಹೋಗಿ 'ಮಿತ್ರಾ ಕಾಳಿದಾಸ, ನಿನ್ನನ್ನೀಗಲೇ ಭೋಜರಾಜನು ಕರೆದುಕೊಂಡು ಬರುವಂತೆ ಆಜ್ಞಾಪಿಸಿರುವನು. ಆದುದರಿಂದ ಹೀಗೆಯೇ ಬರಬೇಕು' ಎಂದು ಹೇಳಿದರು.

ಕಾಳಿದಾಸನು ಕೇವಲ ದೀನನ ಹಾಗೂ, ಅತಿ ಭಯಭ್ರಾಂತನ ಹಾಗೂ ಅವರ ಸಂಗಡ ಬರುತ್ತ ಮಾರ್ಗಮಧ್ಯದಲ್ಲಿ ಯಾವುದೋ ನೆಪದಿಂದ ತಪ್ಪಿಸಿಕೊಂಡು ಹೋಗಲೆಳಸಿ ತತ್ತರಿಸುವನ ಹಾಗೆ ನಟಿಸುತ್ತ ಕೊನೆಗೆ ವಿಧಿಯಿಲ್ಲದೆ ಅವರ ಸಂಗಡ ಬರುವವನಂತೆ ತೋರ್ಪಡಿಸಿಕೊಂಡು ಭೋಜನ ಸಭೆಗೆ ಬಂದನು.

ಕಂಕುಳಲ್ಲಿಟ್ಟುಕೊಂಡಿರುವ ಮೀನಿನ ಬಾಲವು ಸ್ವಲ್ಪ ಮೇಲೆ ಕಾಣಿಸುತ್ತಿದ್ದಿತು. ಆ ಮೀನಿನಿಂದ ತೊಟತೊಟನೆ ಬೊಟ್ಟುಬೊಟ್ಟಾಗಿ ನೀರು ಕೆಳಗೆ ಬೀಳುತ್ತಿದ್ದಿತು. ಆಗ ಭೋಜರಾಜನು ಕಾಳಿದಾಸನನ್ನು ನೋಡಿ ಹೀಗೆ ಕೇಳಿದನು.

"ಕಕ್ಷೇ ಕಿಂ ತವ? ಪುಸ್ತಕಂ, ಕಿಮುದಕಂ?  
ಕಾವ್ಯಾರ್ಥ ಸಾರೋದಕಂ, ಗಂಧಃ ಕಿಂ?  
ನನು ರಾಮರಾವಣ ಮಹಾ ಸಂಗ್ರಾಮರಂಗೋದ್ಭವಃ,  
ಪುಚ್ಛಃ ಕಿಂ? ನನು ತಾಳಪತ್ರ ಲಿಖಿತಂ,  
ಕಿಂ ಪುಸ್ತಕಂ ಭೋಃ! ಕವೇ? ರಾಜನ್, ಭೂಮಿ  
ಜನೈಶ್ಚ ಸೇವಿತಮಿದಂ ರಾಮಾಯಣಂ ಪುಸ್ತಕಂ"

ಸೀ|| ಕಾಳಿದಾಸನೆ ನಿನ್ನ ಕಂಕುಳಲ್ಲಿರುವುದೇಂ?  
ಕೇಳು ಪುಸ್ತಕವಿದು ಲಾಲಿಸುವುದು  
ಲೀಲೆಯಲ್ಲಿದು ನೀರು ತಟ್ಟಿಡುತಿಹುವದೇಂ?  
ಆಲಿಸು ಕಾವ್ಯಾರ್ಥಸಾರ ನೀರು  
ತಾಳಲಾಗದ ಮಹಾ ದುರ್ಗಂಧವೇನಿದು?  
ಖೂಳ ರಾವಣರಾದಿ ಹೆಣದ ಕಂಪು  
ಬಾಲವೇನಿದು ಕಾಣುತಿಹುದು ಕವೀಂದ್ರನೇ?  
ತಾಳೋಲೆಗರಿಯಿಂದ ಬರೆದ ವೃತ್ತಂ

ಗೀ|| ಪೇಳು ಪುಸ್ತಕವಾವುದು ? ವೇಳೆಯರಿತು
ಮೇಲುಭೂಮಿಯ ಜನಗಳು ಸೇವಿಸುತಿಹ
ಮೂಲಸುಮಹಿತ ರಾಮಾಯಣವಿದು ಭೂಪ
ತಾಳು ಶಾಂತಿಯ ಕೋಪವ ಕಳೆವುದಾರ್ಯ ||

ಭೋಜ—ನಿನ್ನ ಕಂಕುಳಲ್ಲಿರುವುದೇನು ?
ಕಾಳಿದಾಸ—ಪುಸ್ತಕವು.
ಭೋಜ—ನೀರು ತೊಟ್ಟಿಡುವುದೇತಕ್ಕೆ ?
ಕಾಳಿದಾಸ—ಕಾವ್ಯಾರ್ಥವಲ್ಲಿನ ಸಾರವು ನೀರಾಗಿ ಬೀಳುವುದು.
ಭೋಜ—ದುರ್ವಾಸನೆಯೇನು ?
ಕಾಳಿದಾಸ—ರಾಮರಾವಣರ ಯುದ್ಧದಲ್ಲಿ ಸತ್ತ ಹೆಣಗಳ ವಾಸನೆ
ಭೋಜ—ಬಾಲವೇನು ?
ಕಾಳಿದಾಸ—ಹಿಂದುಮುಂದು ಕತ್ತರಿಸದಿರುವ ಹೊಸತಾಳೆಯ ಗರಿಯಲ್ಲಿ ಬರೆಯಲ್ಪಟ್ಟದ್ದು.
ಭೋಜ—ಕವಿವರ್ಯ, ಆ ಪುಸ್ತಕದ ಹೆಸರೇನು ?
ಕಾಳಿದಾಸ—ರಾಜೇಂದ್ರಾ, ಭೂಜನರು ಆದರಿಸುತ್ತಿರುವ ಶ್ರೀರಾಮಾಯಣ ಪುಸ್ತಕವಿದು.

ಎಂದು ಕಾಳಿದಾಸನು ನಿರ್ಭೀತಿಯಾಗಿ ನುಡಿಯಲು, ಭೋಜರಾಜನು ಅವನ ಕಂಕುಳಲ್ಲಿರುವ ಮೀನಿನ ಕಟ್ಟನ್ನು ಬಿಚ್ಚಿಸಿದನು. ಕಾಳಿದಾಸನ ಕಾಳೀ ಮಂತ್ರಪ್ರಭಾವದಿಂದ ಅದು ನಿಜವಾಗಿಯೂ ಶ್ರೀರಾಮಾಯಣ ಗ್ರಂಥವೇ ಆಗಿದ್ದಿತು. ಭಟ್ಟ, ಬಾಣ ಮೊದಲಾದ ಕವಿಗಳೆಲ್ಲರೂ ತರಗುಟ್ಟುತ್ತಿದ್ದರು

ತದನಂತರ ಭೋಜಮಹಾರಾಜನು ಕವಿಗಳು ಮಾಡಿದ ಕಪಟಕೃತ್ಯಗಳಿಗೆ ಕೋಪಿಸಿ, ಇಂತಹ ದುರ್ಮಾರ್ಗಿಗಳಾದ ಪಂಡಿತರು ಇರಲಾಗದೆಂದು— 'ಅಹೋ ಪಂಡಿತರೇ, ನೀವೆಲ್ಲರೂ ನಮ್ಮ ದೇಶದಲ್ಲಿರಕೂಡದು, ಹೊರಟುಹೋಗಿರಿ' ಎಂದು ಆಜ್ಞಾಪಿಸಿದನು ಆಗ ಪಂಡಿತರೆಲ್ಲರೂ ರಾಜನಿಗೂ, ಕಾಳಿದಾಸ

ನಿಗೂ ನಮಸ್ಕರಿಸಿ—“ ಮಹಾ ಪ್ರಭೂ, ನಮ್ಮ ತಪ್ಪುಗಳನ್ನು ಕ್ಷಮಿಸಿರಿ. ನಾವು ಯಾವ ದೇಶಕ್ಕೆ ಹೋದರೂ ನಿನ್ನಂಥ ರಾಜಚಂದ್ರನನ್ನು ನೋಡಲಾರೆವು. ಫಲಭರಿತವಾದ ವೃಕ್ಷವನ್ನು ಪಕ್ಷಿಗಳು ಸೇರಿದಂತೆ ನಿನ್ನನ್ನು ನಾವು ಆಶ್ರಯಿಸಿರುವೆವು. ಮೊದಲಿನಿಂದಲೂ ನಮ್ಮನ್ನು ಪೋಷಿಸಿ,ಈಗ ರಾಜ್ಯದಿಂದ ಓಡಿಸುವುದು ಧರ್ಮವಲ್ಲ” ಎಂದು ಅನೇಕವಿಧವಾಗಿ ಮೊರೆಯಿಟ್ಟುಕೊಂಡರು.

ಕಾಳಿದಾಸನು ಕನಿಕರಿಸಿ, ಭೋಜನ ಸಂಗಡ—“ ಪ್ರಭುವೇ ಅವರನ್ನು ದೇಶದಿಂದ ಹೊರಡಿಸುವಷ್ಟು ಕಠಿಣವಾದ ದಂಡನೆಯನ್ನು ವಿಧಿಸಲಾಗದು. ವಿದ್ವಾಂಸರ ವಿದ್ಯಾವೈದುಷ್ಯವೂ, ಹಾಗೂ ಅಪ್ರತಿಹತವಾದ ಪ್ರತಿಭೆಯೂ, ಅಸೂಯಾಳುಗಳೂ, ಶತ್ರುಗಳೂ ಇಲ್ಲದೆ ಪ್ರಜ್ವಲಿಸಲಾರದು ಆದುದರಿಂದ ಅವರು ನಮ್ಮ ಅಂತರಂಗ ಮಿತ್ರರಾಗಿರುವರು ಕರುಣಿಸು ” ಎಂದು ಪ್ರಾರ್ಥಿಸಿದನು.

ಭೋಜರಾಜನು ‘ಪ್ರಿಯಕಾಳಿದಾಸ, ಲೋಕದಲ್ಲಿ ನಿನ್ನನ್ನು ಹೋಲುವ ಪಂಡಿತರಾರೂ ಇಲ್ಲವು ಮಹಾಕವಿಯಾದ ನಿನಗೆ ಅಪಕಾರಮಾಡಲೆಳಸಿದ ಈ ಕವಿಗಳ ವಿಷಯದಲ್ಲಿ ಸಹಾನುಭೂತಿಯಿನ್ನು ತೋರಿಸುವುದರಿಂದಲೇ ನಿನ್ನ ಮಹಾನುಭಾವತ್ವವು ವ್ಯಕ್ತವಾಗುತ್ತಿರುವುದು’ ಎಂದು ಅನೇಕ ಪರಿಯಾಗಿ ಆತನ ಗುಣಕಥನಮಾಡಿ, ಪಂಡಿತರನ್ನು ಕ್ಷಮಿಸಿ ಮನೆಗಳಿಗೆ ಕಳುಹಿಸಿದನು. ಕವಿಗಳು ಕಾಳಿದಾಸನ ಉಪಕಾರವನ್ನು ಸ್ಮರಿಸುತ್ತ ತಾವು ಆತನ ಮೇಲೆ ಅಸೂಯೆಪಟ್ಟದ್ದಕ್ಕಾಗಿ ವಿಷಾದಿಸುತ್ತ ತಮ್ಮತಮ್ಮ ಮನೆಗಳಿಗೆ ಹೊರಟುಹೋದರು.



## ಹೇಮಚಂದ್ರ.

ಭೋಜರಾಜನ ಆಸ್ಥಾನದಲ್ಲ ಕಾಳಿದಾಸನು ಕವಿಶಿಖಾಮಣಿ, ವಿದ್ವನ್ಮಣಿ ಎಂಬ ಕೀರ್ತಿಯು ದಿಗಂತ ವಿಶ್ರುತವಾಗಿದ್ದಿತು. ಹೀಗಿರಲು ಅವಂತಿದೇಶ

ವಾಸಿಯಾದ ಹೇಮಚಂದ್ರನೆಂಬ ಕವಿಯು ಶಾಸ್ತ್ರವಾದದಿಂದ ಹೇಗಾದರೂ ಕಾಳಿದಾಸನನ್ನು ಜಯಿಸಬೇಕೆಂದು ನಿಶ್ಚಯಿಸಿ, ಧಾರಾನಗರಕ್ಕೆಬಂದು ಒಂದು ಸತ್ರದಲ್ಲಿ ಇಳಿದುಕೊಂಡನು.

ಈ ಕವಿಯು ಪ್ರತಿಷ್ಠಾವಂತನಾದುದರಿಂದಲೇ ಪಾಲಕಿ-ಪರಿವಾರದೊಂದಿಗೆ ಸಂಚಾರಮಾಡುತ್ತಿದ್ದನು. ಈತನಿಗೆ ಭೋಜನ ಆಸ್ಥಾನದಿಂದ ಕಾಳಿದಾಸನನ್ನು ತೊಲಗಿಸಿ, ಆ ಉನ್ನತ ವಿದ್ವತ್ಪದವಿಯನ್ನು ತಾನು ಆಕ್ರಮಿಸಿಕೊಳ್ಳಬೇಕೆಂದು ದುರುದ್ದೇಶವಿದ್ದಿತು.

ಹೀಗೆ ಪ್ರತಿದಿನವೂ ಪಾಲಕಿಯನ್ನು ಹತ್ತಿಕೊಂಡು ಪಟ್ಟಣವೆಲ್ಲವನ್ನೂ ತಿರುಗುತ್ತ ಅಲ್ಲಲ್ಲಿ ವಿಶೇಷಗಳನ್ನು ಕಂಡು ತಿಳಿದುಕೊಳ್ಳುತ್ತಿದ್ದನು. ಈ ಸಮಾಚಾರವನ್ನು ಕಾಳಿದಾಸನು ಕೇಳಿ ಆತನ ವಿದ್ಯಾವೈದುಷ್ಯವೆಂಥದೋ ತಿಳಿದುಕೊಂಡು ಯುಕ್ತಿಯಿಂದ ಅವಮಾನಮಾಡಬೇಕೆಂದುಬಗೆದು, ತಾನು ಬೋಯಿವೇಷವನ್ನು ಧರಿಸಿ ಹೇಮಚಂದ್ರನ ಪಾಲಕಿಹೊರುವ ಬೋಯಿಗಳ ಸಂಗಡ ಕಲೆತು ವರ್ತಿಸುತ್ತಿದ್ದನು

ಒಂದು ದಿನ ಹೇಮಚಂದ್ರನು ಅತಿ ತ್ವರಿತವಾಗಿ ಎಲ್ಲಿಯೋ ಹೋಗಬೇಕೆಂದಾಲೋಚಿಸಿ, ಪಾಲಕಿ ಹೊರುವ ಬೋಯಿಗಳನ್ನು ಕುರಿತು—'ಎಲೋ, ಯಾರೋ ಅಲ್ಲಿ?' ಎಂದು ಕೂಗಿದನು. ಆಗ ಕಾಳಿದಾಸನು ಬಂದು—'ಮಹಾ ಪ್ರಭೂ, ಏನಪ್ಪಣೆ?' ಎಂದು ಕೇಳಿದನು. ಹೇಮಚಂದ್ರನು—'ಈಗ ದೂರಪ್ರಯಾಣಮಾಡಬೇಕಾಗಿರುವುದು, ಬೋಯಿಗಳೆಲ್ಲರೂ ಸಿದ್ಧವಾಗಿರುವರಷ್ಟೆ?' ಎಂದನು. ಕಾಳಿದಾಸನು ನಯವಿನಯ ಭಕ್ತಿಗಳಿಂದ—'ಎಲ್ಲರೂ ಸಿದ್ಧವಾಗಿದ್ದಾರೆ ಮಹಾ ಸ್ವಾಮಿ, ಅಪ್ಪಣೆಯಾಗುವುದೊಂದೇ ಆಲಸ್ಯ' ಎಂದು ಹೇಳಿದನು.

ಈ ಮಾತನ್ನು ಹೇಮಚಂದ್ರನು ಕೇವಲ ಅಭಿಮಾನವನ್ನು ಪ್ರಕಟಿಸುತ್ತ ಪಾಲಕಿಯಲ್ಲಿ ಕುಳಿತು ಪ್ರಯಾಣಮಾಡಿದನು. ಪಾಲಕಿಯ ಮುಂಭಾಗದ ಕೊಂಬನ್ನು ಕಾಳಿದಾಸನೂ ಮತ್ತೊಬ್ಬ ಬೋಯಿಯೂ, ಹಿಂಭಾಗದ

ಕೊಂಬನ್ನು ಬೇರೆ ಇಬ್ಬರು ಬೋಯಿಗಳೂ ಹೊತ್ತಿದ್ದರು. ಹೀಗೆ ಕೆಲವುದೂರ ಹೋಗಲಾಗಿ ಕಾಳಿದಾಸನು ಶ್ರಮಹೊಂದಿದವನಂತೆಕಾಣಲು ಹೇಮಚಂದ್ರನು ಅದನ್ನು ನೋಡಿ ಹೀಗೆ ಹೇಳಿದನು—

" ಅಯಮಾಂದೋಲಿಕಾದಂಡಃ ಸ್ಕಂದಂ ಕಿಂ ತವ ಬಾಧತಿ "

" ಅಹೋ ! ಬೋಯಿಯೇ, ಈ ಪಲ್ಲಕ್ಕಿಯ ಕೊಂಬು ನಿನಗೆ ಬಾಧೆಯನ್ನು ಉಂಟುಮಾಡುವುದೇನು ? "

ಈ ಶ್ಲೋಕಾರ್ಧದಲ್ಲಿ ಹೇಮಚಂದ್ರನು ವ್ಯಾಕರಣ ವಿರುದ್ಧವಾಗಿ ' ಬಾಧತೆ ' ಎಂದು ಹೇಳಬೇಕಾಗಿದ್ದ ಕಡೆ ' ಬಾಧತಿ ' ಎಂದು ತಪ್ಪು ಪ್ರಯೋಗಮಾಡಿದನಾದುದರಿಂದ ಕಾಳಿದಾಸನು ಕೇಳಿ ಸಹಿಸಲಾರದೆ—

" ನಬಾಧತೇತಥಾಮಾಂಹಿಯಥಾಬಾಧತಿ ಬಾಧತೇ "

" ಅಯ್ಯಾ, ನೀವು ವ್ಯಾಕರಣವಿರುದ್ಧವಾಗಿ ಪ್ರಯೋಗಿಸಿದ ' ಬಾಧತಿ ' ಎಂಬ ಪದವು ಬಾಧಿಸುವಷ್ಟು ಈ ಪಾಲಕಿಯ ಕೊಂಬು ಬಾಧಿಸುವುದಿಲ್ಲ ಎಂದನು "

ಈ ಮಾತನ್ನುಕೇಳಿ ಹೇಮಚಂದ್ರನು ಅತ್ಯಾಶ್ಚರ್ಯಗೊಂಡು ಆಹಾ ! ಪಾಲಕಿಹೊರುವವರಲ್ಲಿ ಇಂತಹ ಪಾಂಡಿತ್ಯವಿರುವುದುಂಟೇ ! ಎಂದು ಬೆರಗಾಗಿ ' ಎಲವೋ, ಈರೀತಿ ಸಂಸ್ಕೃತಭಾಷಾಜ್ಞಾನವು ನಿನಗೆ ಹೇಗೆ ಉಂಟಾಯಿತು ?' ಎಂದು ಕೇಳಲು—' ಸ್ವಾಮಿಾ, ತಮ್ಮಂತಹ ಪಂಡಿತರ ಸೇವೆಯಿಂದ ಉಂಟಾಗಿರುವುದು ' ಎಂದು ಹೇಳಲು ಹೇಮಚಂದ್ರನು—ಅಂತಹ ಪಂಡಿತನಾರು ? ' ಎಂದು ಕೇಳಿದನು. ' ಆದಕ್ಕೆ ಅಯ್ಯಾ, ಈ ಪಟ್ಟಣದಲ್ಲಿ ಕಾಳಿದಾಸನೆಂಬ ವಿದ್ವಾಂಸನಿರುವನು. ನಾನು ಆ ಪಂಡಿತನ ಪಾಲಕಿಯನ್ನು ಹೊರುವವನು. ಅವರು ಶಿಷ್ಯರಿಗೆ ಆಗಾಗ ಹೇಳುವ ಮಾತುಗಳನ್ನು ಕೇಳಿ ಏನೋ ಅಲ್ಪಸ್ವಲ್ಪ ಸಂಸ್ಕೃತಜ್ಞಾನವುಂಟಾಗಿರುವುದು. ಕಾಳಿದಾಸನ ಪಾಂಡಿತ್ಯವಿಷ್ಟೆಂದು ಹೇಳಲಾರಿಗಳವು ? ' ಎಂದನು.

ಹೇಮಚಂದ್ರನು ಈ ಮಾತುಗಳನ್ನು ಕೇಳಿ ಕಾಳಿದಾಸನನ್ನು ಜಯಿಸುವುದು ಹೇಗೆ ? ಕೋಟಿದ್ರವ್ಯವನ್ನಾದರೂ ವ್ಯಯಮಾಡಿ ಯಾವ ಉಪಾಯ

ನಿಂದಲಾದರೂ ಆ ಕಾಳಿದಾಸನನ್ನು ಭೋಜರಾಜನ ಆಸ್ಥಾನದಿಂದ ತೊಲಗಿಸ ಬೇಕೆಂದು ಆಲೋಚಿಸಿ, ಮರುದಿನ ಕಾಳಿದಾಸನ ಗೃಹಕ್ಕೆ ಹೋಗಲು ನಿಶ್ಚಯಿಸಿದನು.

ಇಷ್ಟರಲ್ಲಿ ಕಾಳಿದಾಸನು ತನ್ನ ಗೃಹಕ್ಕೆ ಹೇಮಚಂದ್ರನು ಬರುವ ಸಮಾಚಾರವನ್ನು ತಿಳಿದುಕೊಂಡು ದಾಸೀವೇಷವನ್ನು ಧರಿಸಿ ಗೃಹದ್ವಾರದಲ್ಲಿ ನಿಂತುಕೊಂಡಿದ್ದನು. ಹೇಮಚಂದ್ರನು ಬಂದು ದಾಸೀರೂಪದಲ್ಲಿರುವ ಕಾಳಿದಾಸನಹತ್ತಿರ 'ಎಲೌ ದಾಸೀ, ಕಾಳಿದಾಸನೆಲ್ಲಿರುವನು' ಎಂದು ಕೇಳಿದನು. ದಾಸಿಯು ಹೀಗೆ ಉತ್ತರ ಹೇಳಿದಳು :—

" ನಖಲೀನಖಲೀನಲೀಲಯಾ ನಮಯನ್ನನ್ನಮಯನ್ನವಂಹಯಂ
ನಿರಗಾದುರಗಾರಿರಂ ಹಸಾ ಪುರಗಾರುತ್ಮತ ಗೋಪುರಾದ್ವಹಿಃ "

'(ಕಾಳಿದಾಸನು) ಹೊಸಕುದುರೆಯನ್ನು ಹತ್ತಿ ಕಡಿವಾಣವನ್ನು ವಿಲಾಸದಿಂದ ಎಳೆಯುತ್ತ ಬಿಡುತ್ತ ಗರುತ್ಮಂತನ ಸಮವಾದ ವೇಗದಿಂದ ಗಾರುಡಗೋಪುರವನ್ನು ಬಿಟ್ಟು ಪಟ್ಟಣದ ಹೊರಗಡೆ ಕ್ರೀಡಾರ್ಥವಾಗಿ ಹೋಗಿರುವನು."

ದಾಸೀ ವಾಕ್ಯವನ್ನು ಕೇಳಿ ಹೇಮಚಂದ್ರನು 'ಅಬ್ಬಾ ! ಕಾಳಿದಾಸನ ನೈಪುಣ್ಯವು ಆತನ ಪರಿವಾರದಲ್ಲೆಲ್ಲ ವ್ಯಾಪಿಸಿ ಪ್ರಜ್ವಲಿಸುವುದಲ್ಲಾ ! ಎಂದಾಶ್ಚರ್ಯಪಟ್ಟು 'ಎಲೌ ದಾಸೀ, ನೀನು ಕಾಳಿದಾಸನ ದಾಸಿ ಎಂದು ಹೇಳುತ್ತಿರುವೆ ನಿನ್ನ ಶರೀರದಲ್ಲಿ ಸ್ವಲ್ಪವಾದರೂ ಭೂಷಣಗಳಿಲ್ಲವಲ್ಲ, ಕಾರಣವೇನು ?" ಎಂದು ಹೇಮಚಂದ್ರನು ಕೇಳಿದನು. ಅದಕ್ಕೆ ಪ್ರತ್ಯುತ್ತರವಾಗಿ ಹೀಗೆ ಹೇಳಿದನು :—

" ಹಸ್ತಸ್ಯ ಭೂಷಣಂ ದಾನಂ ಸತ್ಯಂ ಕಂಠಸ್ಯ ಭೂಷಣಂ
ಶ್ರೋತ್ರಸ್ಯ ಭೂಷಣಂ ಶಾಸ್ತ್ರಂ ಭೂಷಣೈಃ ಕಿಂ ಪ್ರಯೋಜನಂ "

ಕಂ|| ದಾನವೆ ಹಸ್ತಕ್ಕೆ ಭೂಷಣ |
ವಾ ನತಸೂನೃತವೆ ಕಂಠಭೂಷಣ ಶೃತಿಗುಂ ||
ಮಾನಿತಶಾಸ್ತ್ರವೆ ಭೂಷಣ |
ತಾನುಳಿದಾ ಬಾಹ್ಯಭೂಷಣಗಳಿಂ ಫಲವೇಂ ||

“ ಹಸ್ತಕ್ಕೆ ದಾನವೇ ಭೂಷಣವು, ಕಂಠಕ್ಕೆ ಸತ್ಯವೇ ಭೂಷಣವು. ಕಿವಿಗಳಿಗೆ (ಶ್ರವಣಕ್ಕೆ) ಶಾಸ್ತ್ರವೇ ಭೂಷಣವು ಮಿಕ್ಕ ಭೂಷಣಗಳಿಂದ ಪ್ರಯೋಜನವೇನು ? ” ಎಂದು ಹೇಳಲು

ಆ ದಾಸಿಯ ಮಾತುಗಳನ್ನು ಕೇಳಿ ಹೇಮಚಂದ್ರನು–‘ ನಿನಗಿಂತಹ ವೈದುಷ್ಯವು ಹೇಗುಂಟಾಯಿತು? ನೀನು ಯಾವ ದೇವರನ್ನು ಪೂಜಿಸುವೆ?’ ಎಂದು ಕೇಳಲು ತತ್‍ಕ್ಷಣವೇ ದಾಸಿಯು ಹೀಗೆ ಉತ್ತರಕೊಟ್ಟಳು :—

“ ವಿಹಂಗೋವಾಹನಂ ಯಸ್ಯ ತ್ರಿಕಚಾಯತ್ರ ಭೂಷಣಂ
ಸಾಲಪಾ ವಾಮಭಾಗೇಷ ತೇ ದೇವಾಃ ಶ್ಶರಣಂ ಮಮ ? ”

“ (ವಿ) ಗರುಡನೂ, (ಹಂ) ಹಂಸವೂ, (ಗೋ) ಎತ್ತೂ ಯಾರ ವಾಹನಗಳೋ (ತ್ರಿ) ತ್ರಿಶೂಲ, (ಕ) ಕಮಂಡಲು, (ಚಾ) ಚಾಪ ಯಾರ ಭೂಷಣಗಳೋ, (ಸಾ) ಸಾವಿತ್ರಿ, (ಲ) ಲಕ್ಷ್ಮೀ, (ಪಾ) ಪಾರ್ವತಿ ಯಾರ ವಾಮಭಾಗದಲ್ಲಿ ಪಟ್ಟಮಹಿಷಿಯರಾಗಿರುವರೋ ಆ ದೇವತೆಗಳೇ ನನಗೆ ರಕ್ಷಕರು ’

ಈ ಅದ್ಭುತಶ್ಲೋಕವನ್ನು ಕೇಳಿ ಹೇಮಚಂದ್ರನು—“ ದಾಸಿಗೆ ಇಷ್ಟು ವೈದುಷ್ಯವಿರುವಲ್ಲಿ ಕಾಳಿದಾಸನಿನ್ನೆಷ್ಟರವನಿರಬೇಕು ? ಈತನನ್ನು ಜಯಿಸುವುದೇ ದುಸ್ತರವಾಗಿರುವುದು. ಆದುದರಿಂದ ನನ್ನ ಪ್ರಯತ್ನವನ್ನು ನಿಲ್ಲಿಸಿ ಸುಮ್ಮನಿರುವುದೇ ಉತ್ತಮವು ” ಎಂದು ಯೋಚಿಸಿ, ಯಾರಿಗೂ ತಿಳಿಯದಂತೆ ಬಂದ ದಾರಿಯನ್ನು ಹಿಡಿದು ಹೊರಟುಹೋದನು.

## ತ್ರಿಪೀಡಾಸ್ತು ದಿನೇದಿನೇ.

ಒಂದು ದಿನ ಭೋಜರಾಜನು ಸಕಲ ವಿದ್ವದ್ವೃಂದದಿಂದೊಡಗೂಡಿ ಒಡ್ಡೋಲಗದಲ್ಲಿದ್ದನು. ಆ ಸಮಯದಲ್ಲಿ ಒಬ್ಬ ಬಡಬ್ರಾಹ್ಮಣನು ಬಂದು ರಾಜನಿಗಾಶೀರ್ವಾದ ಮಾಡುವಾಗ “ ತ್ರಿಪೀಡಾ ಪರಿಹಾರೋಸ್ತು” ಎಂದು ದೊಡ್ಡವರು ಹೇಳುತ್ತಿದ್ದ ಆಶೀರ್ವಾದವಾಕ್ಯವನ್ನು ಮರೆತು ಸಂಸ್ಕೃತಜ್ಞಾನವಿಷ್ಟಾದರೂ ಇಲ್ಲದವನಾದುದರಿಂದ ಅದಲುಬದಲಾಗಿ ‘ ತ್ರಿಪೀಡಾಸ್ತು ದಿನೇ ದಿನೇ’ ಎಂದು ಆಶೀರ್ವದಿಸಿದನು.

ಭೋಜಮಹಾರಾಜನು ಈ ಅಶುದ್ಧವಾಕ್ಯವನ್ನು ಕೇಳಿ ಬಹು ಕೋಪೋಪಿತಮಾನಸನಾಗಿ ಭಟರನ್ನು ಕರದು "ಎಲವೊ! ಈ ಬ್ರಾಹ್ಮಣನನ್ನು ಪಟ್ಟಣದಿಂದ ಹೊರಗೆ ಕಳುಹಿಸಿರಿ" ಎಂದಾಜ್ಞಾಪಿಸಿದನು. ಇಷ್ಟರಲ್ಲಿ ಕವಿರತ್ನ ಕಾಳಿದಾಸನು ಆ ಬ್ರಾಹ್ಮಣನು ಮೂಢನೆಂದು ತಿಳಿದು ಮನಸ್ಸು ಕರಗಿ, ಈ ದರಿದ್ರಬ್ರಾಹ್ಮಣನಿಗೆ ಹೇಗಾದರೂ ಉಪಕಾರ ಮಾಡಬೇಕೆಂದು 'ಮಹಾಪ್ರಭೂ. ನೀವು ಅಪಾರ್ಥ ಮಾಡಿಕೊಂಡಿರುವಿರಿ ಈ ಬ್ರಾಹ್ಮಣನು ಮಹಾವಿದ್ವಾಂಸನು. ಆದುದರಿಂದಲೇ ಇಂತಹ ಗಂಭೀರೋಕ್ತಿಯಿಂದ ಆಶೀರ್ವದಿಸಿದನು ನೀವು ಆ ಕವಿಯ ಅಭಿಪ್ರಾಯವನ್ನು ತಿಳಿದುಕೊಳ್ಳದೆ ಆತನನ್ನು ಹೊರಗೆ ಕಳುಹಿಸೆಂದು ಅಪ್ಪಣೆ ಮಾಡಿರುವುದು ಅನ್ಯಾಯ" ಎಂದು ಹೇಳಿದನು

ಭೋಜನು-ಕವಿವರಾ! ಆ ಕವಿಯ ಅಭಿಪ್ರಾಯವು ಬೇರೆಯಾಗಿರುವುದಲ್ಲವೆ ನೀನು ಹೇಳಿದದು? ಹಾಗಾದರೆ ಅದು ಹೀಗೆ? ಹೇಳು ನೋಡೋಣ" ಎಂದನು. ಆಗ ಕವಿಸಾರ್ವಭೌಮನು ಹೀಗೆ ಹೇಳಿದನು.—

"ಪ್ರದಾನೇ ವಿಪ್ರಪೀಡಾಸ್ತು ಪುತ್ರಪೀಡಾಸ್ತು ಭೋಜನೇ
ಶಯನೇ ದಾರಪೀಡಾಸ್ತು ತ್ರಿಪೀಡಾಸ್ತು ದಿನೇದಿನೇ"

"ದಾನಮಾಡುವಾಗ 'ಈ ಬ್ರಾಹ್ಮಣನಿಗೇನು ಕೊಡಲೀ'' ಎಂಬ ದುಃಖವೂ, ಭೋಜನ ಸಮಯದಲ್ಲಿ ಪುತ್ರರನ್ನು ಹೇಗೆ ಸಂತೈಸಲೀ ಎಂಬ ದುಃಖವೂ, ಶಯನಸಮಯದಲ್ಲಿ ಈ ರಾತ್ರಿ ನನ್ನ ಪ್ರಿಯಳನ್ನು ಯಾವ ವಿಲಾಸದಿಂದ ಸಂತೈಸಲೀ ಎಂಬ ದುಃಖವೂ-ಈ ಮೂರು ದುಃಖಗಳೂ ಪ್ರತಿದಿನವೂ ನಿನಗುಂಟಾಗಲೀ" ಎಂದು

ಕಾಳಿದಾಸನ ಶ್ಲೋಕಾರ್ಥವನ್ನು ಗ್ರಹಿಸಿ ಸಭೆಯವರೆಲ್ಲಾ ಆನಂದಪರವಶರಾದರು. ಈತನ ಔದಾರ್ಯವನ್ನು ಮನಸ್ಸಿನಲ್ಲಿಯೇ ಕೊಂಡಾಡಿದರು. ರಾಜಾಸ್ಥಾನದಲ್ಲಿರುವ ಪಂಡಿತರನೇಕರು ಸ್ವಾರ್ಥಪರರಾಗಿ ತಮ್ಮ ಗೌರವ ಪ್ರತಿಷ್ಠೆಗಳನ್ನೇ ಹೆಚ್ಚಿಸಿಕೊಳ್ಳುತ್ತ ಇತರರ ಮಹದಾಶಯವನ್ನು ಸಹ ಅಪಾರ್ಥವಾಗಿ ಮಹಾರಾಜರಲ್ಲಿ ಹೇಳಿ, 'ತಾವುಂಟೋ ಮೂರುಲೋಕವುಂಟೋ!' ಎಂಬಂತೆ ವಿಜೃಂಭಿಸುವುದೆಲ್ಲಿ? ಕೇವಲ ಮೂರ್ಖರು ದರಿದ್ರಾವಸ್ಥೆಯಿಂದ ಧನಾಕಾಂಕ್ಷಿಗಳಾಗಿ ಅಲ್ಲಸಲ್ಲದ ಮಾತುಗಳನ್ನಾಡಿದರೂ ಅದನ್ನೇ ಉತ್ತಮಾ

ರ್ಥಕ್ಕೆ ತಿರುಗಿಸಿ ರಾಜಸನ್ಮಾನ ಮಾಡಿಸುವ ಅಸ್ವಾರ್ಥಮೂರ್ತಿಯಾದ ಈ ಮಹಾ ಕಾಳಿದಾಸನೆಲ್ಲಿ-ಎಂದು ಮೊದಲಾಗಿ ಕೊಂಡಾಡುತ್ತಿದ್ದರು. ಭೋಜರಾಜನು ಸಂತೋಷಿಸಿ ಆ ಬ್ರಾಹ್ಮಣನನ್ನು ಕರೆಸಿ ಸನ್ಮಾನಮಾಡಿ ಕಳುಹಿಸಿದನು.



## ವಿಲೋಚನಕವಿ ಆತನ ಕುಟುಂಬ.

ಒಂದು ದಿನ ಕಾಶೀದೇಶದಿಂದ ವಿಲೋಚನನೆಂಬ ಒಬ್ಬ ಕವಿಯು ತನ್ನ ಹೆಂಡತಿ, ಮಗ ಸೊಸೆ ಇವರನ್ನೊಡಗೂಡಿ ಭೋಜರಾಜನ ಸಭೆಗೈತಂದನು. ಭೋಜಭೂಮಿಪನು ಅವರ ಮುಖತೇಜಸ್ಸನ್ನು ನೋಡಿ ದೊಡ್ಡ ವಿದ್ವಾಂಸನೆಂದರಿತು ಈ ಸಮಸ್ಯೆಯನ್ನು ಕೊಟ್ಟನು.

"ಕ್ರಿಯಾಸಿದ್ಧಿಸ್ಸತ್ವೇಭವತಿ ಮಹತಾನ್ನೋಪಕರಣೇ"

"ದೊಡ್ಡವರಿಗೆ ಕಾರ್ಯಸಿದ್ಧಿಯು ಅವರ ಪ್ರಭಾವದಿಂದುಂಟಾಗುವುದೇ ಹೊರತು ಉಪಕರಣಗಳಿಂದುಂಟಾಗುವುದಿಲ್ಲ"

ಈ ಸಮಸ್ಯೆಯನ್ನು ಕೇಳಿ ವೃದ್ಧ ವಿದ್ವಾಂಸನಾದ ಕವಿಯು ಹೀಗೆ ಪೂರ್ತಿಮಾಡಿದನು—

"ಘಟೋಜನ್ಮಸ್ಥಾನಂ ಮೃಗಪರಿಜನೋ ಭೂರ್ಜ-ವಸನೋ
ವನೇವಾಸಃ ಕಂದಾದಿಕಮಶನಮೇವಂ ವಿಧಗುಣಃ
ಅಗಸ್ತ್ಯಃ ಪಾಥೋಧಿಂ ಯಂಕೃತ ಕರಾಂಭೋಜಕುಹರೇ
ಕ್ರಿಯಾಸಿದ್ಧಿ ಸ್ಸತ್ವೇಭವತಿ ಮಹತಾನ್ನೋಪಕರಣೇ"

ಸೀ|| ಮುನಿಪಸ್ತ್ಯನು ಜನಿಸಿದ ಕುಂಭದಿ
ವನಮೃಗಗಳೆ ಪರಿವಾರವವಗೆ
ಘನತರ ವಸ್ತ್ರವು ಭುಜಪತ್ರಿಯಾತಗೆ
ಅನುದಿನ ಘೋರಕಾನನವೆ ಮನೆಯು

ನೆನೆಯಲಾ ಕಂದಮೂಲಾದಿ ಫಲಂಗಳೇ
ತನಗೆ ಆಹಾರವು ಸನುಮತದೊಳು
ಇನಿತು ಗುಣಂಗಳನುಂಟಾದವನಾವರು
ಮುನಿದು ಕೋಪದೊಳಸಾಧ್ಯವನೆಸಗಿದ

ಗೀ|| ಮನುಜಮಾತ್ರದವನಿಗಿದು ಸಾಧ್ಯಮಹುದೆ
ವನಜದಂತಹ ಕರದಿ ಸಮುದ್ರವನ್ನು
ವಿನಯದೊಳು ಧರಿಸಿದನಿವ ನೋಡಲಾಗಿ
ಅನಘನಾದವನಿಗೆ ಕ್ರಿಯಾಸಿದ್ಧಿ ಬಲವು

' ಅಗಸ್ತ್ಯನಿಗೆ ತವರುಮನೆಯು ಕುಂಭವು, ಮೃಗಗಳೇ ಪರಿವಾರ, ಭುಜಪತ್ರಿಯೇ ವಸ್ತ್ರವು ಅಡವಿಯಲ್ಲಿ ನಿವಾಸವು, ಕಂದಮೂಲಫಲಾದಿಗಳೇ ಆಹಾರವು ಇಂಥ ಗುಣಗಳನ್ನುಂಟಾದ ವನಾದರೂ ಸಮುದ್ರವನ್ನು ಪದ್ಮದಂತಹ ತನ್ನ ಕೈಯಲ್ಲಿ ಇಟ್ಟುಕೊಂಡನು ಆದುದರಿಂದ ಮಹಾತ್ಮರಿಗೆ ಕಾರ್ಯಸಿದ್ಧಿಯು ತಮ್ಮ ಪ್ರಭಾದಲ್ಲಿರುವುದೇ ಹೊರತು ಸಾಧನದಲ್ಲಿಲ್ಲ "

ಈ ಸಮಸ್ಯಾ ಪೂರಣವನ್ನು ಕೇಳಿ ಭೋಜರಾಜನು ಅತ್ಯಂತ ಪ್ರಸನ್ನನಾಗಿ ಪ್ರಿತಿಯಿಂದ ವಿಶೇಷ ಬೆಲೆಬಾಳುವ ಒಂದು ರತ್ನವನ್ನು ಬಹುಮಾನ ಮಾಡಿದನು.

ಈ ವೃದ್ಧನ ಸಂಗಡ ಲಕ್ಷ್ಮಿಯಂತೆ ನಿಂತುಕೊಂಡಿದ್ದ ಆತನ ಹೆಂಡತಿಯನ್ನು ನೋಡಿ ಭೋಜರಾಜನು–' ಅಮ್ಮಾ ನಿನಗೆ ತೋರಿದ ಮೇರೆಗೆ ಅದೇ ಸಮಸ್ಯೆಯನ್ನು ಪೂರ್ತಿಮಾಡುವೆಯಾ ? ' ಎಂದು ಕೇಳಲು ಆಕೆಯು ಹೀಗೆ ಹೇಳಿದಳು :—

ರಥಸ್ಯೈಕಂ ಚಕ್ರಂ ಭುಜಗಯಮಿತಾಸ್ಸಪ್ತತುರಗಾ
ನಿರಾಲಂಬೋಮಾರ್ಗಶ್ಚರಣ ವಿಕಲಸ್ಸಾರಥಿರಪಿ
ರವಿರ್ಯಾತ್ಯೇವಾಂತಂ ಪ್ರತಿದಿನ ಮಪಾರಸ್ಯನಭಸಃ
ಕ್ರಿಯಾಸಿದ್ಧಿಸ್ಸತ್ವೇಭವತಿ ಮಹತಾಂನೋಪಕರಣೇ "

ಸೀ|| ಗಾಲಿಯೊಂದೇ ರಥಕ್ಕಾಲೋಕಿಸಿನೊಡೆ ತಾ
ನೇಳು ಕುದುರೆಗಳು ಸಾಲಿವಲ್ಲ

ವ್ಯಾಳಬಂಧನವು ನಿರಾಧಾರವಮಾ ದಾರಿ
ಕಾಲಿಲ್ಲದವನು ಸಾರಥಿಯು ನೋಡೆ
ವೇಳೆವೇಳೆಯೊಳು ನಭೋಸ್ಥಳಕಡರುತೆ
ಕಾಲಕಾಲಕೆ ಸುತ್ತಿಸುತ್ತಿಬರುವ
ಪೇಳಲಸಾಧ್ಯವಾ ಗಾಳಿಯ ವೇಗವ
ತಾಳಿಹನಿಂತು ಮಹಾತ್ಮನಾತ

ಗೀ|| ಲೀಲೆಯಿಂತಿದನಾರರಿದಪರು ಜಗದಿ
ಶೂಲಿಯರಿದಪನಿದರ ಸಮೂಲವನ್ನು
ತೀಲುತಿರ್ಪನು ರಸದ ಗುಂಡಿನ ತೆರದೊಳು
ಮೇಲು ಕಾರ್ಯದ ಸಿದ್ಧಿಯು ಪಿರಿದು ಪಿರಿದು

ಈ ಶ್ಲೋಕವನ್ನು ಕೇಳಿ ಭೋಜರಾಜನು ಸಂತುಷ್ಟನಾಗಿ ಹನ್ನೆರಡು ರತ್ನಗಳನ್ನು ಕೊಟ್ಟನು. ತರುವಾಯ ವೃದ್ಧ ಪಂಡಿತನ ಮಗನನ್ನು ನೋಡಿ "ಬಾಬೂ, ನಿನಗೆ ತಿಳಿದ ರೀತಿಯಲ್ಲಿ ಸಮಸ್ಯೆಯನ್ನು ಪೂರ್ತಿಮಾಡು" ಎನಲು ಆತನು ಹೀಗೆ ಹೇಳಿದನು:—

"ವಿಜೇತವ್ಯಾಲಂಕಾಚರಣ ತರಣೀಯೊ ಜನನಿಧಿಃ
ವಿಪಕ್ಷಃ ಪೌಲಸ್ತ್ಯೋ ರಣಭುವಿ ಸಹಾಯಾಶ್ಚ ಕಪಯಃ
ಪದಾತಿರ್ಮರ್ತ್ಯೋಽಸೌ ಸಕಲಮವಧೀದ್ರಾಕ್ಷಸಕುಲಂ
ಕ್ರಿಯಾಸಿದ್ಧಿಸ್ಸತ್ತ್ವೇಭವತಿ ಮಹತಾನ್ನೋಪಕರಣೇ"

ಸೀ|| ರಾಮನು ಲಂಕೆಯಂ ಜಯಿಸಬೇಕಾಗಿಹುದು
ದಾಮಹಾ ಶರಧಿಯ ದಾಂಟಿ ರಭದಿ
ಭೀಮಪರಾಕ್ರಮ ಪೌಲಸ್ತ್ಯನಂದನ
ರಾಮಣೀಯಕಮಜೇಯಮದು ಕೋಟೆ
ತಾಮಸಪ್ರಕೃತಿಗಳಗಣಿತ ರಕ್ಕಸ
ರಾ ಮಹಾಬಲರತಿ ಕ್ರೂರಬಲವು
ಸ್ತೋಮವು ತನಗೆ ವಾನರಬಳಗವು ಮತ್ತೆ
ತಾಂ ಮನುಜನು ನೋಡಲಲ್ಪವೆಲ್ಲ

ಗೀ|| ನೇಮವಿಲ್ಲದೆ ರಾಕ್ಷಸ ಪೀಚಕವನಿ-
ರ್ನಾಮ ಮಾಡಿದನಿದು ಕ್ರಿಯಾಸಿದ್ಧಿಬಲವೆ
ಕಾಮಿಸಿದೊಡಿದು ಯಾವುದರಿಂದಲಹುದು
ಸ್ವಾಮಿಯಾಜ್ಞೆಯನರಿವುದಸಾಧ್ಯಮಿಳೆಯೋಳ್

“ರಾಮನು ಲಂಕಾಪಟ್ಟಣವನ್ನು ಜಯಿಸಬೇಕಾಗಿರುವುದು; ಸಮುದ್ರವನ್ನು ಗಾಳಿಯೋಟದಿಂದ ದಾಟಬೇಕು, ಯುದ್ಧಭೂಮಿಯಲ್ಲಿ ಶತ್ರುವು ನೋಡಿದರೆ ಪುಲಸ್ತ್ಯಬ್ರಹ್ಮನ ಮೊಮ್ಮಗನಾದ ರಾವಣಾಸುರನು, ತನ್ನ ಸಹಾಯಕರು ನೋಡಿದರೆ ಕೋತಿಗಳು, ತಾನು ಪಾದಚಾರಿಯಾದ ಮನುಷ್ಯನು. ಆದರೂ ಆ ಶ್ರೀರಾಮಚಂದ್ರನು ಸಕಲ ರಾಕ್ಷಸ ಸಮೂಹವೆಲ್ಲವನ್ನೂ ಜಯಿಸಿದನಲ್ಲವೇ ? ಆದುದರಿಂದ ಮಹಾತ್ಮರಿಗೆ ಕಾರ್ಯಸಿದ್ಧಿಯು ಪ್ರಭಾವದಿಂದಲೇ ಹೊರತು ಸಾಧನದಿಂದಲ್ಲ.”

ಭೋಜರಾಜನು ಬಹಳವಾಗಿ ಸಂತೋಷಿಸಿ ಹದಿನಾರು ಆನೆಗಳನ್ನು ಕೊಟ್ಟನು. ಅನಂತರ ಈ ಯುವಕನ ಸಮೀಪದಲ್ಲಿ ನಿಂತಿದ್ದ ನವಯೌವನ ಸುಕುಮಾರಿಯಾದ ಸಾಧ್ವೀಮಣಿಯನ್ನು ನೋಡಿ, “ಅಮ್ಮಾ, ನೀನೊಂದು ರೀತಿಯಾಗಿ ಸಮಸ್ಯೆಯನ್ನು ಪೂರ್ತಿಮಾಡಿ ನನ್ನ ಮನಕ್ಕಾನಂದಪಡಿಸಬೇಕು” ಎಂದು ಕೇಳಲು ಆಕೆಯು ಆ ಸಮಸ್ಯೆಯನ್ನು ಶೃಂಗಾರರಸಬಂಧುರವಾಗಿ ಪೂರ್ಣಮಾಡಿದಳು—

“ಧನುಃಪೌಷ್ಪಂ ಮೌರ್ವೀಮಧುಕರ ಮಯೀಚಂಚಲದೃಶಾಂ
ದೃಶಾಂಕೋಣೋ ಬಾಣಸ್ಸುಹೃದಪಿ ಜಡಾತ್ಮಾಹಿಮಕರಃ
ಸ್ವಯಂಚೈಕೋಽನಂ ಸಕಲ ಭುವನಂ ವ್ಯಾಕುಲಯತಿ
ಕ್ರಿಯಾಸಿದ್ಧಿಸ್ಸತ್ತ್ವೇಭವತಿ ಮಹತಾನ್ನೋಪಕರಣೇ”

ಸೀ|| ವರಧನು ಪೂಗಳು ಮರಿದುಂಬಿಗಳೆ ದಾರ
ತರುಣಿಯ ಚಂಚಲೇಕ್ಷಣವೆ ಬಾಣ
ನಿರುತ ಮಾಜಡನಾದ ಚಂದ್ರನೇ ಮಿತ್ರನು
ಶರಿರಮಿಲ್ಲವನಂಗನೆಂಬ ಪೆಸರು
ಹರಿಸೂನು ವೀತನಿಂತಬಲನಾಗಿರ್ದೊಡಂ
ಧರಿಸಿ ಬಾಣವ ಪೂಡಿ ಮೆರೆವ ಜಗದಿ

ಪುರುಷರು ತರುಣಿಯರೆಲ್ಲರು ದಾಸರು
ಭರಿಸಲಾರರು ಬಾಣಹತಿಗೆ ನರರು

ಗೀ|| ಹರನ ಕಣ್ಣಿನೊಳುರಿದನು ಮರಳಿ ಮರಳಿ
ಕರಗಿ ಕೊರಗಿಪನೀಪರಿ ಸ್ಮರನು ನಿರುತ
ಅರಿಯಲಿದು ಕಾರ್ಯಸಿದ್ಧಿಯ ಬಲವೆ ಬಲವು
ಹೊರತು ಸಾಧನದಿಂದಲಿವಲ್ಲವೆಂಬರ್

"ಮನ್ಮಥನಿಗೆ ಧನಸ್ಸು ಹೂಗಳು, ದುಂಬಿಗಳೇ ಕಟ್ಟಲ್ಪಟ್ಟದಾರ, ಚಂಚಲನೇತ್ರವುಳ್ಳ ಸ್ತ್ರೀಯರ ಕಟಾಕ್ಷವೇ ಬಾಣಗಳು, ಕೇವಲ ಜಡತ್ವವುಳ್ಳ ಚಂದ್ರನೇ ಸ್ನೇಹಿತನು, ತಾನು ನೋಡಿದರೆ ಅಂಗಹೀನನು ಇಂಥವನಾದರೂ ಸಮಸ್ತ ಲೋಕಗಳನ್ನು ತಲ್ಲಣಗೊಳಿಸುತ್ತಿರುವನು. ಆದುದರಿಂದ ಕಾರ್ಯಸಿದ್ಧಿಯು ಪ್ರಭಾವದಿಂದಲೇ ಹೊರತು ಸಾಧನದಿಂದಲ್ಲ"

ಇಂತಹ ಅಪೂರ್ವವಾದ ಕವಿತಾವಿಲಾಸವನ್ನು ನೋಡಿ ಕೇಳಿ ವಿದ್ವತ್ಕವಿಮಂಡಲವೆಲ್ಲ ಆಶ್ಚರ್ಯಗೊಂಡಿತು. ಭೋಜರಾಜನು ಮಹಾನಂದಕಂದಳಿತ ಹೃದಯಾರವಿಂದನಾಗಿ ಲೀಲಾವತಿಯೊಡನೆ ಕವಿದಂಪತಿಗಳಿಗೆ ಅಮೂಲ್ಯ ರತ್ನಾಭರಣಗಳನ್ನು ಕೊಟ್ಟು ಸತ್ಕರಿಸಿ ಕಳುಹಿಸಿದನು.



## ಮಣಿಭದ್ರ, ಸುಶರ್ಮ.

ಭೋಜರಾಜನು ಕಾಳಿದಾಸನ ವಿಷಯವಾಗಿ ಯಾವುದೋ ಕಾರಣದಿಂದ ಅಸಮಾಧಾನಗೊಂಡಿದ್ದನು. ಈ ಸಮಾಚಾರವನ್ನು ಆಸ್ಥಾನ ಕವಯಿತ್ರಿಯು ತಿಳಿದುಕೊಂಡು ಹೀಗೆ ಹೇಳಿದನು :—

"ದೋಷಮಪಿ ಗುಣವತಿಜನೇ ದೃಷ್ಟ್ವಾ ಗುಣರಾಗಿಣಿ
ಪ್ರೀತ್ಯೈವ ಶಶಿನಿ ಪತಿತಂ ಗಶ್ಯತಿನಭಿದ್ಯಂತೇಲೋಕಃ ಕಳಂಕಮಪಿ"

ಕಂ|| ಗುಣವಂತನ ದೋಷಗಳಂ |
ಗಣಿಸದೆ ಸತ್ಪುರುಷರವನ ತೋಷಿಪರನಿಶಂ ||

ಎಣಿಪರೆ ಕಳಂಕಿಯೆಂದೇಂ |
ಕುಣಿದಾಡುವರ್ಗೈದೆ ಚಂದ್ರನಂ ನಿರುಕಿಸುತಂ ||

"ಗುಣವಂತನಾದ ಮನುಷ್ಯನಲ್ಲಿ ದೋಷಗಳನ್ನು ಕಂಡರೂ, ಗುಣಗಳಲ್ಲಿ ಅನುರಾಗವನ್ನು ತೋರಿಸುವವರು ಅನಾದರ ಮಾಡುವುದಿಲ್ಲ ಚಂದ್ರನಲ್ಲಿರುವ ಮಚ್ಚೆ (ಕಳಂಕ)ಯನ್ನು ಕೂಡ ಲೋಗರು ಸಂತೋಷದಿಂದಲೇ ನೋಡುವರಲ್ಲವೇ ?"

ಈ ಶ್ಲೋಕಾರ್ಥವನ್ನು ಭೋಜರಾಜನು ತಿಳಿದರೂ ಪೂರ್ವದಂತೆಯೇ ಕಾಳಿದಾಸನನ್ನು ಗೌರವಿಸದಿದ್ದನು ಹೀಗೆ ತನಗಿಂತಲೂ ಕಡಮೆಯಾದ ಪಂಡಿತರನ್ನು ಗೌರವಿಸುತ್ತಲೂ, ತನ್ನನ್ನು ಅವರ ಸರಿಸಮಾನವಾಗಿಯಾದರೂ ನೋಡದೆ ಇರುವುದನ್ನೂ ಕಾಳಿದಾಸನು ರೂಢಿಯಾಗಿ ತಿಳಿದುಕೊಂಡು ತ್ರಾಸನ್ನು ನೆಪಮಾಡಿ ಹೀಗೆ ಹೇಳಿದನು—

" ಪ್ರಾಪ್ಯ ಪ್ರಮಾಣಪದವೀಂ ಕೋನಾಮಾಸ್ತೇತುಲೇವಲೇಪಸ್ತೇ
ನಯಸಿಗರಿಷ್ಠ ಮಧಸ್ತಾಲ್ಲಘುತರಮುಚ್ಚೈಸ್ತರಾಂಕುರುಷೇ"

"ಅಹೋ ತ್ರಾಸೇ, ಮಾನ (ತೂಕದ ಯೋಗ್ಯತೆ) ವನ್ನು ನಿರ್ಣಯಿಸುವ ಅಧಿಕಾರವಿರುವುದೆಂದು ನಿನಗೇಕೀಗರ್ವವು ? ಗೌರವವು (ಭಾರ-ಪೂಜ್ಯತೆ) ಇರುವುದನ್ನು ಕೆಳಗೆ ಕಳುಹಿಸುತ್ತಿರುವೆ, (ಅಗೌರವ ಮಾಡುತ್ತಿರುವೆ) ಲಘುವಾದುದನ್ನು (ಹಗುರವಾದ ವಸ್ತುವನ್ನು ಅಲ್ಪವನ್ನು) ವಿಶೇಷ ಮೇಲಕ್ಕೇರಿಸುವೆ (ಗೌರವಿಸುವ)"

" ರಾಜೇಂದ್ರಾ ! ಮಹಾಕವಿಯಾದ ನನ್ನನ್ನು ತಿರಸ್ಕರಿಸಿ ಕೆಲವು ಕವಿಗಳನ್ನು ಪೂಜಿಸುತ್ತಿರುವೆ. ನೀನು ನಮ್ಮಲ್ಲಿನ ತಾರತಮ್ಯವನ್ನು ತಿಳಿದುಕೊಳ್ಳಲಾರೆ" ಎಂದು ಧ್ವನಿತವಾಗುವಂತೆ ಹೇಳಿ-' ಮಹಾ ಕವಿಯಾದ ನಾನು ಎಲ್ಲಿಗೆ ಹೋದರೂ ಗೌರವವುಂಟಾಗುವುದು. ಈತನು ಅಗೌರವಿಸುತ್ತಿದ್ದರೂ ಈ ದೇಶದಲ್ಲಿದ್ದು ದುಃಖಪಡುವುದೇಕೆ ? ಎಲ್ಲಾ ದೇಶಗಳನ್ನೂ ತಿರುಗಲು ಶಕ್ತನಾದ ನನಗೆ ಈ ದೇಶದ ಅಭಿಮಾನವೇಕೆ? ತಂದೆ ತೋಡಿಸಿದ ಭಾವಿಯೆಂದು ಉಪ್ಪುನೀರನ್ನು ಯಾರಾದರೂ ಕುಡಿಯುವರೇ? ಇನ್ನು ಇಲ್ಲಿರಬಾರದು' ಎಂದು ತಿಳಿದು ಕಾಳಿದಾಸನು ನಿಜಗೃಹಕ್ಕೆ ತೆರಳಿದನು. ಆ ಮೊದಲು ಭೋಜರಾಜನ ಆಸ್ಥಾನಕ್ಕೆ ಬರದೆ ಇದ್ದನು. ಕಾಳಿದಾಸ ರಹಿತವಾದ ಆಸ್ಥಾನವು ಶೂನ್ಯಗೃಹದಂತೆ ಕಳಾಹೀನವಾಗಹತ್ತಿತು, ಕವಿತಾವಿಲಾಸವು ತಗ್ಗಿ

ಹೋಯಿತು. ಸಮಸ್ಯಾಪೂರಣವನ್ನು ಅತ್ಯಂತ ಮನೋಹರವಾಗಿ ಮಾಡುವ ವಿದ್ವತ್ಕವಿವರೇಣ್ಯರಿಲ್ಲದೆಹೋಯಿತು. ಬಾಣ-ಭಟ್ಟಾದಿಗಳು ಹಲವರಿದ್ದರೂ ಕಾಳಿದಾಸನಿಗೆ ಸಮಾನರಾಗುವರೇ? ಇಂಥ ಸಮಯದಲ್ಲಿ ಒಂದು ವಿಚಿತ್ರ ಚರಿತ್ರೆಯು ಜರುಗಿತು ಅದೇನೆಂದರೆ—

ಧಾರಾನಗರದಲ್ಲಿ ಒಬ್ಬ ಗೃಹಸ್ಥನಿಗೆ ಮಾಣಿಭದ್ರ, ಸುಶರ್ಮರೆಂಬ ಇಬ್ಬರು ಮಕ್ಕಳಿದ್ದರು. ಇವರನ್ನು ಯುಕ್ತವಯಸ್ಕರಾದ ಮೇಲೆ ತಂದೆಯು ವಿದ್ಯಾಭ್ಯಾಸಕ್ಕಾಗಿ ಕಾಶಿಗೆ ಕಳುಹಿಸಿದನು ಇವರಲ್ಲಿ ಮಾಣಿಭದ್ರನು ಪ್ರಾತಃಕಾಲದಲ್ಲಿಯೇ ಎದ್ದು, ಸ್ನಾನಾದಿಗಳನ್ನು ತೀರಿಸಿಕೊಂಡು, ಆಚಾರ್ಯರಿಗೆ ನಮಸ್ಕರಿಸಿ, ನಿಯಮದಿಂದ ಗುರುವಿನಲ್ಲಿ ವಿದ್ಯಾಭ್ಯಾಸಮಾಡುತ್ತಿದ್ದನು. ಸುಶರ್ಮನು ಎಲ್ಲಾ ನಿಯಮಗಳನ್ನುಲ್ಲಂಘಿಸಿ ದುರುಸ್ಸಾಚಾರತೆಯುಳ್ಳವನಾಗಿದ್ದನು.

ಹೀಗೆ ಕೆಲವುಕಾಲ ಕಳೆಯಲು ಉಭಯರೂ ಅವರವರ ಕರ್ಮಕ್ಕನುಗುಣವಾಗಿ ಸಲಕ ಶಾಸ್ತ್ರಪಾರಂಗತರಾದರು. ಆದರೂ ಮಾಣಿಭದ್ರನ ವಿದ್ಯಾವೈದುಷ್ಯವೂ, ತೇಜಸ್ಸೂ ಸುಶರ್ಮನಿಗೆ ಇಲ್ಲದೆ ಹೋಯಿತು.

ಒಂದು ದಿನ ಸಹೋದರರೀರ್ವರೂ ಗುರುವಿನ ಬಳಿಗೆ ಹೋಗಿ ನಮಸ್ಕರಿಸಿ—'ಸ್ವಾಮಿ, ನಾವು ತಮ್ಮ ಸನ್ನಿಧಿಯಲ್ಲಿ ಸೇರಿ ಬಹುಕಾಲವಾಯಿತು. ತಮ್ಮ ಕೃಪಾಕಟಾಕ್ಷದಿಂದ ಶಾಸ್ತ್ರಜ್ಞಾನವು ಲಭಿಸಿರುವುದು ಆದುದರಿಂದ ನಮ್ಮ ಸ್ವದೇಶಕ್ಕೆ ಹೋಗಲಪ್ಪಣೆಯನ್ನು ದಯಪಾಲಿಸಬೇಕೆಂದು ಪ್ರಾರ್ಥಿಸಿದರು. ಉಪಾಧ್ಯಾಯರು ಸಂತೋಷಿಸಿ ಅವರಿಗಾಶೀರ್ವದಿಸಿ-ಜಾಗರೂಕತೆಯಿಂದ ಹೋಗಿಬನ್ನಿರೆಂದು ಅನುಜ್ಞೆ ಕೊಟ್ಟರು.'

ಆ ದಿನ ಮಧ್ಯಾಹ್ನವೇ ಕಾಶಿಯಿಂದ ಹೊರಟು ಸಾಯಂಕಾಲಕ್ಕೆ ಒಂದು ಗ್ರಾಮವನ್ನು ಸೇರಿ ಅಲ್ಲಿ ತಂಗಿದ್ದು, ಮರುದಿನ ಭೋಜನಸಾಮಗ್ರಿಗಳನ್ನು ತೆಗೆದುಕೊಂಡು ಪ್ರಯಾಣ ಮಾಡಿದರು. ಕೆಲವು ದೂರ ಹೋಗಿ ಅರಣ್ಯಮಧ್ಯದಲ್ಲಿ ಒಂದುಕಡೆ ನಿರ್ಮಲೋದಕವು ಪ್ರವಹಿಸುತ್ತಿರಲು ಅಲ್ಲಿ ದೊಡ್ಡವೃಕ್ಷವೂ, ಕೆಳಗೆ ವಿಶಾಲವಾದ ವೈದಾನವೂ ಇದ್ದುದನ್ನು ಕಂಡು ಮಧ್ಯಾಹ್ನ

ಭೋಜನವನ್ನು ಇಲ್ಲಿಯೇ ತೀರಿಸಿಕೊಂಡು ಹೋಗಬೇಕೆಂದು ನಿಶ್ಚಯಿಸಿ ಅಲ್ಲಿಯೇ ನಿಂತರು.

ಇದಾದಮೇಲೆ ಸುಶರ್ಮನು ಮಾಣಿಭದ್ರನನ್ನು ನೋಡಿ—'ಅಣ್ಣಾ, ನಾವಿಲ್ಲಿ ಸ್ನಾನಮಾಡಿದಮೇಲೆ ಏನುಮಾಡಬೇಕು?' ಎಂದನು. ಚನ್ನಾಗಿ ಅಡಿಗೆಮಾಡಿ ಭೋಜನವನ್ನು ತೀರೀಸಿಕೊಂಡು ಮುಂದೆಪ್ರಯಾಣಮಾಡೋಣ' ಎಂದು ಮಾಣಿಭದ್ರನು ಹೇಳಿದನು. ಹಾಗೆಯೇ ಇಬ್ಬರೂ ನದಿಯಲ್ಲಿ ಸ್ನಾನ ಮಾಡಿದರು. ತರುವಾಯ ಸುಶರ್ಮನು-ಅಣ್ಣಾ ನಮಗೆ ಬೇಕಾದ ಭೋಜ ನಸಾಮುಗ್ರಿಗಳೆಲ್ಲ ಸಿದ್ಧವಾಗಿರುವುವು. ಆದರೆ ಬೆಂಕಿಯು ಮಾತ್ರ ಇಲ್ಲವಲ್ಲಾ' ಎಂದು ಕೇಳಿದನು ಇದಕ್ಕೆ ಮಾಣಿಭದ್ರನು-'ತಮ್ಮಾ, ನೀನು ಎಲ್ಲವನ್ನೂ ಅಣಿಮಾಡು ನಾನು ಸಮೀಪದಲ್ಲಿ ಬೆಂಕಿಯನ್ನು ಬರಮಾಡುತ್ತೇನೆ' ಎಂದು ಹೇಳಿ, ನಿಯಮದಿಂದ ಮಹಾಮಂತ್ರ ಜಪವನ್ನು ಮಾಡಿದನು ತತ್ಕ್ಷಣ ಅಗ್ನಿಯು ಜ್ವಾಲಾಸ್ವರೂಪವಾಗಿ ಅವಿರ್ಭವಿಸಿತು.

ಈ ವಿಚಿತ್ರವನ್ನು ಸುಶರ್ಮನು ನೋಡಿ ಅತ್ಯಾಶ್ಚರ್ಯಗೊಂಡು 'ನಾವೀರ್ವರೂ ಒಬ್ಬ ಆಚಾರ್ಯನ ಬಳಿಯಲ್ಲೇ ವಿದ್ಯಾಭ್ಯಾಸಮಾಡಿದೆವಲ್ಲಾ! ನನಗಾವ ಮಂತ್ರವೂ ಸಿದ್ಧಿಸಲಿಲ್ಲ. ಈತನಿಗೆ ಮಂತ್ರಗಳೆಲ್ಲವೂ ಚನ್ನಾಗಿ ಸಿದ್ಧಿಸಿರುವುವು. ನಾವೀರ್ವರೂ ಮನೆಗೆ ಹೋದ ಬಳಿಕ ಮಾಣಿಭದ್ರನ ವಿದ್ಯೆಯು ಜಗತ್ಪ್ರಖ್ಯಾತಿಯಾಗಿ ಪ್ರಕಾಶಿಸುವುದೇ ಹೊರತು ನನ್ನ ವಿದ್ಯೆಯು ಪ್ರಕಾಶಿಸಲಾರದು. ಇದರಿಂದ ನನಗವಮಾನವೂ, ಈತನಿಗೆ ಪುರಸ್ಕಾರವೂ ಜೀವಾವಧಿ ತಪ್ಪಿದ್ದಲ್ಲ. ಇವನಿರುವವರೆಗೂ ನನಗೆ ನೆಮ್ಮದಿಯುಂಟಾಗಲಾರದು. ಆದ ಕಾರಣ ಇವನನ್ನಿಲ್ಲಿಯೇ ಕೊಂದುಹಾಕಿ, ಗೃಹವನ್ನು ಸೇರಬೇಕು'— ಈರೀತಿ ಆಲೋಚಿಸಿದನು.

ಅನಂತರ ಇಬ್ಬರೂ ಅಡಿಗೆಮಾಡಿ ಊಟಮಾಡಿದರು. ಬಹುದೂರ ಪ್ರಯಾಣಮಾಡಿದವರಾದುದರಿಂದ ಮಾರ್ಗಾಯಾಸ ಪರಿಹಾರ ಮಾಡಿಕೊಳ್ಳುವುದಕ್ಕಾಗಿ ಮಾಣಿಭದ್ರನು ಸ್ವಲ್ಪ ನಿದ್ರೆಮಾಡಿದನು. ಸುಶರ್ಮನು ಇದೇ ಇವನನ್ನು ಕೊಲ್ಲುವುದಕ್ಕೆ ಸಮಯವೆಂದು ತಿಳಿದು ಗಾಢನಿದ್ರೆಯಲ್ಲಿರುವ ಮಾಣಿಭದ್ರನ ಎದೆಯಮೇಲೆ ಹತ್ತಿ ಕುಳಿತುಕೊಂಡನು.

ಮಾಣಿಭದ್ರನು ನಿದ್ರೆಯಿಂದೆಚ್ಚತ್ತು,ತನ್ನ ಎದೆಯಮೇಲೆ ಖಡ್ಗವನ್ನು ಹಿಡಿದು ಕೊಲ್ಲುವುದಕ್ಕೆ ಉದ್ಯುಕ್ತನಾಗಿದ್ದ ತಮ್ಮನನ್ನು ನೋಡಿ ಭಯಪಟ್ಟು-ಅಯ್ಯೋ! ಅಯ್ಯೋ!! ಎಂದು ಗಟ್ಟಿಯಾಗಿ ಕೂಗಿಕೊಂಡನು

ಅರಣ್ಯದಲ್ಲಿ ಅವನ ಹಾಹಾಕಾರವನ್ನು ಕೇಳಿ ರಕ್ಷಿಸುವರಾರಿರುವರು? ಸುಶರ್ಮನು ಅತಿ ಕಠಿಣಹೃದಯನೂ, ಸಾವಿರಾರು ಜೀವಹತ್ಯಗಳನ್ನು ಮಾಡುವುದಕ್ಕಾದರೂ ಹಿಂದೆಗೆಯದ ಪಾಪಿಯೂ ಆಗಿದ್ದನು ಹೇಗಾದರೂ ಇವನನ್ನು ಕೊಲ್ಲಬೇಕೆಂದು ದೃಢನಿಶ್ಚಿತನಾಗಿದ್ದುದರಿಂದ ದಯೆದೋರದೆಹೋದನು

ಆಗಲಾ ಮಾಣಿಭದ್ರನು ಅತ್ಯಂತ ದೀನಸ್ವರದಿಂದ "ತಮ್ಮಾ ನಿನಗೆ ನಾನೇನೂ ಅಪಕಾರವನ್ನು ಮಾಡಿದವನಲ್ಲ. ನಾವೀರ್ವರೂ ಚಿಕ್ಕಂದಿನಿಂದಲೂ ಯಾವಾಗಲೂ ಒಬ್ಬರನ್ನೊಬ್ಬರು ಅಗಲದೆ ಅತಿ ಸ್ನೇಹದಿಂದ ವಿದ್ಯಾಭ್ಯಾಸಮಾಡಿ ಪ್ರವೀಣರಾಗಿ ಇನ್ನು ನಮ್ಮ ತಂದೆತಾಯಿಗಳನ್ನು ನೋಡಿ ಸಂತೋಷಪಡುವುದಕ್ಕಾಗಿ ಮನೆಗೆ ಹೋಗುತ್ತಿದ್ದೇವೆ ನಾನಿಲ್ಲಿ ಮಲಗುವವರೆಗೂ ನನ್ನ ಮೇಲೆ ನೀನು ಯಾವ ವಿರೋಧಭಾವವನ್ನೂ ತೋರಿಸಿದವನಲ್ಲ, ಇಷ್ಟರಲ್ಲಿಯೇ ಸಹೋದರರನ್ನು ಕೊಲ್ಲೆಂದು ಯಾರು ಉಪದೇಶಮಾಡಿದರು? ಈ ಅರಣ್ಯದಲ್ಲಿ ಯಾರೂ ಇಲ್ಲವಲ್ಲಾ! ಈ ಬುದ್ಧಿಯು ನಿನಗೇ ಸ್ವತಃ ಹುಟ್ಟಿರಬಹುದು. ಅಯ್ಯೋ! ನನ್ನ ಜೀವವು ನಿನ್ನ ಕೈವಶವಾಯಿತಲ್ಲಾ. 'ನನಗೆ ತಮ್ಮನಿಂದ ಅರಣ್ಯಮಧ್ಯದಲ್ಲಿ ಮರಣ ಉಂಟಾಗಲಿ' ಎಂದು ಬ್ರಹ್ಮನು ನನ್ನ ಲಲಾಟದಲ್ಲಿ ಮೂರು ಪಙ್ಕ್ತಿಗಳನ್ನು ಬರೆದಿರುವಾಗ ನೀನೇನು ಮಾಡುವೆ?" ಎಂದು ಅನೇಕ ವಿಧವಾಗಿ ಪ್ರಲಾಪಿಸಿದರೂ ಪಾಷಾಣಹೃದಯನಾದ ಸುಶರ್ಮನು ಎದೆಯಮೇಲಿನಿಂದ ಕೆಳಗೆ ಇಳಿಯಲಿಲ್ಲ

ಅದನ್ನು ನೋಡಿ 'ಇನ್ನು ನನಗೆ ಮರಣವು ತಪ್ಪದು' ಎಂದು ನಿಶ್ಚಯಿಸಿ 'ಅಪ್ಪಾ ತಮ್ಮಾ ನನ್ನನ್ನು ಕೊಲ್ಲುವುದರಿಂದ ನಿನಗೆ ಲಾಭವುಂಟಾಗುವುದಾದರೆ ಹಾಗೆಯೇ ಮಾಡು. ನಾನು ನಾಲ್ಕಕ್ಷರಗಳನ್ನು ಬರೆದುಕೊಡುವೆನು. ಆ ಪತ್ರವನ್ನು ನಮ್ಮ ತಂದೆಯಕೈಗೆ ಕೊಡು' ಎಂದು ಹೇಳಿದನು. ಸುಶರ್ಮನು ಅದಕ್ಕೆ ಸಮ್ಮತಿಸಲು, ಒಂದು ಎಲೆಯಮೇಲೆ 'ಅಪ್ರಶಿಖ' ಎಂದು ಬರೆದು ಅವನಕೈಯಲ್ಲಿ ಕೊಟ್ಟನು.

ಇದಾದಮೇಲೆ ಸುಶರ್ಮನು ಮಾಣಿಭದ್ರನ ಕಂಠದಮೇಲೆ ಬಲಗಾಲಿಟ್ಟು ಬಲವಾಗಿ ಕುಳಿತುಕೊಂಡು ಎಡಗಾಲಿಂದ ಎದೆಯನ್ನು ಅದುಮಿ ತುಳಿದುಕೊಂಡು ಒಂದು ಕೈಯಿಂದ ಜುಟ್ಟನ್ನು ಹಿಡಿದು ಹರಿತವಾದ ಕತ್ತಿಯಿಂದ ಚರಚರನೆ ಕಂಠವನ್ನು ಕೊಯ್ದು ಹಾಕಿದನು ತತ್‌ಕ್ಷಣವೇ ಮಾಣಿಭದ್ರನು ಹಾ! ಶ್ರೀಹರೀ, ಎಂದು ಪ್ರಾಣವನ್ನು ಬಿಟ್ಟನು.

ಪಾಠಕಬೃಂದಾ! ಶ್ರೀರಾಮ, ಲಕ್ಷ್ಮಣ, ಧರ್ಮ, ಭೀಮಾರ್ಜುನ, ನಕುಲ, ಸಹದೇವರಂಥ ಸತ್ಯಸಂಧರೂ, ಪಾಪಭೀರುಗಳೂ ಆದ ಪ್ರಿಯಸಹೋದರರನ್ನು ಹೆತ್ತ ನಮ್ಮ ಭರತಮಾತೆಯು ಕಲುಷಿತ ಹೃದಯರಾದ ನೀಚ ಸಹೋದರ (ತಮ್ಮ) ನನ್ನು ಹೆತ್ತಿರುವಳೆಂದರೆ ನಿಮಗೆ ಆಶ್ಚರ್ಯ ವಿಷಾದಗಳು ಉಂಟಾಗದಿರಲಾರವು. ಅಕಟಾ! ಈ ಸುಶರ್ಮನೆಂತಹ ಪಾಪಿಷ್ಠನು? ಇಂತಹ ಅನುಜರಿದ್ದರೇನು ಸತ್ತರೇನು? ಅಣ್ಣತಮ್ಮಂದಿರು ಪರಸ್ಪರ ಪ್ರೀತಿಯುಳ್ಳವರಾಗಿ ಒಬ್ಬರಿಗೆ ಕಷ್ಟಬಂದರೆ ಆ ಕಷ್ಟವು ತಮಗೆ ಬಂದಂತೆ ಭಾವಿಸಿ, ಅದನ್ನು ನಿವಾರಿಸಬಲ್ಲವರಲ್ಲವೇ ಲೋಕಕ್ಕೂ ದೈವಕ್ಕೂ ಪ್ರಿಯರಾಗಿರುವರು? ಈ ನೀಚ ಸುಶರ್ಮನಂಥ ಸಹೋದರರು ಜನಿಸಿದರೆ ಅವರಿಗಾಗಿ ಮತ್ತೊಂದು ನರಕವು ನಿರ್ಮಾಣವಾಗದಿದ್ದರೆ ಮಹಾ ರೌರವಾದಿನರಕಗಳು ಅವರಿಗೆಂತುಸಾಲುವುವು? ಪರಮ ಪಾತಕಿಗಳೂ, ನಿರ್ದಯಾವಂತರೂ ಆದ ನರಾಧಮರು ಯಾವ ಪಾಪಕಾರ್ಯಕ್ಕೂ ಹಿಂದೆಗೆಯರು ತಂದೆಯನ್ನು ಹೊಡೆಯುವುದೂ, ತಾಯಿಯನ್ನು ಕೊಲ್ಲುವುದೂ, ಚಿಕ್ಕಮ್ಮನನ್ನು ಹೊಡೆಯುವುದೂ—ಹೀಗಿದ್ದು ಸಮಾಜಸ್ಥಾಪಕರೆಂದೂ, ಪ್ರಾಣಿದಯಾಪರರೆಂದೂ, ಪಂಚಮೋದ್ಧಾರಕರೆಂದೂ ವಿಜೃಂಭಿಸಿ ಅಂತರಂಗದಲ್ಲಿ ಪಾಪಕಾರ್ಯಗಳನ್ನು ಮಾಡುತ್ತ ರಾಜದ್ರೋಹಿ. ಬಂಧುದ್ರೋಹಿ ಮಿತ್ರದ್ರೋಹಿಗಳಾಗಿ ಉಪಕಾರ ಮಾಡಿದವರಿಗೇನೇ ಅಪಕಾರಮಾಡಿ ಸ್ವಾರ್ಥವನ್ನು ಸಾಧಿಸಿಕೊಳ್ಳಲು ಅಬಲೆಯರನ್ನೂ, ಅನಾಥರನ್ನೂ ಗೋಳಿಡಿಸಿ, ಮೋಸಗೊಳಿಸಿ ಆ ಸಭೆ ಈ ಸಭೆಗಳ ಸದಸ್ಯರೆಂದು ವೇಷಧಾರಿಗಳಾಗಿ ನಟಿಸಿದರೆ ಪರಲೋಕದ ಧರ್ಮಸಭೆಯ ಸದಸ್ಯರಾಗಬಲ್ಲರೇ? ಮಾಣಿಭದ್ರನ ಅಸಾಧಾರಣವಾದ ಮೇಧಾಶಕ್ತಿಯನ್ನು ನೋಡಿ ಸಹಿಸಲಾರದೆ ಅವನ ಶ್ರೇಯೋಭಿವೃದ್ಧಿಗೆ ಹಾನಿಯನ್ನೊಡ್ಡಿದರೆ ಈ ಸುಶರ್ಮನು ತನಗೆ ಮುಂದೆಬರುವ ಮೃತ್ಯುವನ್ನು ತಪ್ಪಿಸಿಕೊಳ್ಳಬಲ್ಲನೇ? ಇಂತಹ ನೀಚರ ಜನ್ಮಕ್ಕೆ ಧಿಕ್ಕಾರ! ಧಿಕ್ಕಾರ!!

ಈ ಅನಾಮಧೇಯ ಸುಶರ್ಮನನ್ನು ನೋಡಿರಿ. ಹೆಸರು ಸುಶರ್ಮ, ಆರ್ಯ, ಆಚಾರ್ಯ, ಮೂರ್ತಿ. ಕಾರ್ಯವೊ? ಕುಶರ್ಮ, ಅನಾರ್ಯ, ಆಚಾರಹೀನ, ಕುಮೂರ್ತಿ, ಹೆಸರುಗಳ ಅರ್ದವು ಈರೀತಿ ಅನರ್ಥಗಳಾಗಿ ಪರಿಣಮಿಸಿರುವುದು. ನಾಮಮಾತ್ರ ಸುಶರ್ಮನಾಗಿ ಕರ್ಮಚಂಡಾಲನಾದ ಈ ಪಾಪಿಯು 'ಅಪ್ರಶಿಖ' ಪತ್ರವನ್ನು ಕೈಯಲ್ಲಿ ಹಿಡಿದುಕೊಂಡು ಅತಿ ಸಂತೋಷಯುತನಾಗಿ ಮನೆಗೆಬಂದು ತಂದೆತಾಯಿಗಳಿಗೆ ಕಾಣಿಸಿಕೊಂಡನು ಅವರು ಮಗನು ಬಹುದಿನಕ್ಕೆ ಹಿಂದಿರುಗಿ ಬಂದನೆಂದು ಮುದ್ದಿಸಿ ಆಲಿಂಗನಮಾಡಿಕೊಂಡು-- 'ತಂದೆ, ಸುಖವಾಗಿ ಬಂದೆಯಾ' ಎಂದು ಕುಶಲಪ್ರಶ್ನೆಯನ್ನು ಮಾಡಿ 'ಮಾಣಿಭದ್ರನೆಲ್ಲಿ? ಎಂದು ಕೇಳಿದರು ಸುಶರ್ಮನು ತಾನು ನಡೆಸಿದ ದುರಾಗತವನ್ನು ಮರೆಸಿಟ್ಟು "ಜನಕಾ! ಅವನೆಷ್ಟು ದಿನಗಳು ಓದಿದರೂ ಒಂದು ಶಾಸ್ತ್ರವಾದರೂ ಪೂರ್ತಿಯಾಗಲಿಲ್ಲ. ಅದುದರಿಂದ ಇನ್ನೂ ಓದುತ್ತಿರುವನು. ನಾನು ಗುರುವು ಹೇಳಿದುದನ್ನೆಲ್ಲಾ ಗ್ರಹಿಸಿ, ಸಮಸ್ತ ಶಾಸ್ತ್ರಗಳಲ್ಲಿಯೂ ಪ್ರವೀಣನಾಗಿ ಬಂದಿರುತ್ತೇನೆ ಇನ್ನೂ ಮಾಣಿಭದ್ರನು ಬರುವುದಕ್ಕೆ ಒಂದು ವರ್ಷಕಾಲ ಬೇಕಾಗುವುದು" ಎಂದುಹೇಳಿ ಅವನು ಬರೆದುಕೊಟ್ಟಿದ್ದ 'ಅಪ್ರಶಿಖ' ಪತ್ರವನ್ನು ತಂದೆಯ ಕೈಯಲ್ಲಿ ಕೊಟ್ಟನು.

ತಂದೆಯು ಪತ್ರವನ್ನು ತೆಗೆದುಕೊಂಡು ಓದಿನೋಡಿದನಾದರೂ ಒಂದಕ್ಷರಕ್ಕೂ ಅರ್ಥ ತಿಳಿಯದೆ ಹೋಯಿತು. ಅಲ್ಲಿದ್ದ ದೊಡ್ಡದೊಡ್ಡ ವಿದ್ವಾಂಸರು ಸಹ ಅದರ ಅರ್ಥವನ್ನು ಹೇಳಲಾರದೆ ಹೋದರು.

ಆತನು 'ಭೋಜರಾಜನ ಸಭೆಯಲ್ಲಿ ಕಾಳಿದಾಸನೇ ಮೊದಲಾದ ವಿದ್ವಾಂಸರಿರುವರಲ್ಲವೇ'? ಎಂದು ಸಭೆಗೆ ಹೋಗಿ ಭೋಜರಾಜನ ಕೈಯಲ್ಲಿ ಆ 'ಅಪ್ರಶಿಖ' ಪತ್ರವನ್ನು ಕೊಟ್ಟು, ಅದರ ಅರ್ಥವನ್ನು ತಿಳಿಸಬೇಕೆಂದು ಕೇಳಿಕೊಂಡನು. ಅಲ್ಲಿ ಕಾಳಿದಾಸನು ಹೊರತು ಭಟ್ಟ-ಬಾಣಾದಿಗಳೆಲ್ಲರೂ ಬಂದು ಇದ್ದರು. ಭೋಜರಾಜನು ಆ ಪತ್ರವನ್ನು ಕವಿಗಳಿಗೆ ಕೊಟ್ಟು ಈ ನಾಲ್ಕಕ್ಷರದ ಅರ್ಥವೇನೆಂದು ಕೇಳಿದನು. ಪಂಡಿತರೆಲ್ಲರೂ ಒಬ್ಬರನೊಬ್ಬರು ನೋಡಿಕೊಳ್ಳುತ್ತ ನಿರುತ್ತರರಾದರು.

ಭೋಜನು ಕೋಪೋದ್ದೀಪಿತಮಾನಸನಾಗಿ—' ಅಹೋ, ಕವಿಗಳೇ, ನನ್ನ ಆಸ್ಥಾನದಲ್ಲಿ ಇಷ್ಟು ಕವಿಗಳಿದ್ದರೂ ನಾಲ್ಕು ಅಕ್ಷರದ ಅರ್ಥವನ್ನು ಹೇಳದಿರುವಿರಿ. ಈ ವಾರ್ತೆಯು ಲೋಕಕ್ಕೆ ತಿಳಿದರೆ ದೊಡ್ಡ ಅಪಕೀರ್ತಿಯು ಸಂಭವಿಸುವುದು. ಆದುದರಿಂದ ನೀವು ಹೇಗಾದರೂ ಒಂದು ತಿಂಗಳು ಅವಧಿಯಲ್ಲಿ ಇದರ ಅರ್ಥವನ್ನು ಹೇಳಿದರೆ ಸರಿ, ಇಲ್ಲವಾದರೆ ಖಂಡಿತವಾಗಿ ನಿಮಗೆ ಮರಣದಂಡನೆಯು ತಪ್ಪದೆ ವಿಧಿಸಲ್ಪಡುವುದು—ಎಂದು ಆಜ್ಞಾಪಿಸಿದನು.

ಪಂಡಿತರೆಲ್ಲರೂ ಅತ್ಯಂತ ಭೀತರಾಗಿ ಸಭೆಯು ಮುಗಿದಮೇಲೆ ತಮ್ಮ ತಮ್ಮ ಮನೆಗಳಿಗೆ ಹೋದರು. ಆದರೆ ಈ ನಾಲ್ಕು ಅಕ್ಷರಗಳಿಗೆ ಏನೆಂದು ಅರ್ಥ ಹೇಳಬಲ್ಲರು ! ಎಲ್ಲರೂ ಒಂದುಕಡೆ ಸೇರಿ ಎಷ್ಟೋ ವಿಧವಾಗಿ ಆಲೋಚನೆ ಮಾಡಿದರು. ಒಬ್ಬರಿಗಾದರೂ ಅದರಅರ್ಥವು ಸ್ಫುರಿಸದೇ ಹೋಯಿತು. ಹೀಗೆ ಇಪ್ಪತ್ತೊಂಭತ್ತು ದಿನಗಳು ಕಳೆದವು. ಇನ್ನೊಂದು ದಿನದೊಳಗಾಗಿ ಹೇಳದಿದ್ದರೆ ಮರುದಿನ ತಪ್ಪದೆ ಮರಣದಂಡನೆಯು ವಿಧಿಸಲ್ಪಡುವುದೆಂದು ಕವಿಗಳೆಲ್ಲರೂ ಪ್ರಾಣವಮೇಲೆ ಆಸೆಯನ್ನು ತೊರೆದು, ದುಃಖಸಮುದ್ರದಲ್ಲಿ ಮುಳುಗಿಹೋದರು.

ಹೀಗಿರಲಾಗಿ ಆ ದಿನ ಒಬ್ಬ ಪಂಡಿತಪುತ್ರನು ಮನೆಯಲ್ಲಿ ಯಾರ ಸಂಗಡಲೋ ಜಗಳವಾಡಿ, ಮುನಿಸುಗೊಂಡು ಆ ಊರಿನ ಆಕ್ಕಪಕ್ಕದಲ್ಲಿರುವ ತನ್ನ ಸೋದರಮಾವನ ಮನೆಗೆ ಹೋಗುತ್ತಿದ್ದನು. ಮಾರ್ಗಮಧ್ಯದಲ್ಲಿ ಹೊತ್ತು ಮುಳುಗಿ ಕತ್ತಲಾಯಿತು. ಆ ಅಂಧಕಾರದಲ್ಲಿ ಮುಂದೆ ಹೋಗುವುದಕ್ಕೆ ಭಯಪಟ್ಟು, ಒಂದು ಕಡೆ ದೊಡ್ಡ ಆಲದಮರವಿರಲು, ಅದರ ವಿಶಾಲವಾದ ಕೊಂಬೆಯಮೇಲೆ ಹತ್ತಿ ಕುಳಿತುಕೊಂಡನು.

ಆ ವೃಕ್ಷದಮೇಲೆ ಪ್ರತಿದಿನವೂ ಭೇತಾಳನು ಸಕಲ ಪಿಶಾಚ ಭೂತಗಣಗಳಿಂದಸೇವಿಸಲ್ಪಡುತ್ತ ಒಡ್ಡೋಲಗಮಾಡಿಕೊಂಡು ಲೋಕಸಮಾಚಾರವನ್ನು ವಿಚಾರಿಸುತ್ತಿದ್ದನು. ಆ ದಿನವೂ ಕೂಡ ಮುಂದಾಗಿ ಒಂದು ಪಿಶಾಚವು ಬಂದು ಚದರವಾದ ಕೊಂಬೆಯಮೇಲೆ ಆಸನವನ್ನು ಮಾಡಿ ಹೊರಟುಹೋಯಿತು.

ಅನಂತರ ಭೇತಾಳನು ಪಿಶಾಚಗಣನಿಂದ ಪರಿವೃತನಾಗಿ ಬಂದು ಎತ್ತರವಾದ ಪೀಠದಲ್ಲಿ ಮಂಡಿಸಿ, ಮಂತ್ರಿಗಳನ್ನು ನೋಡಿ-ಸಚಿವೋತ್ತಮರೇ, ಈ ದಿನ ವಿಶೇಷವೇನೆಂದು ಪ್ರಶ್ನೆಮಾಡಿದನು. ಮಂತ್ರಿಗಳಲ್ಲಿ ಒಬ್ಬನು ಎದ್ದು ಒಂದು ವಿಶೇಷವನ್ನು ಹೇಳುತ್ತಿದ್ದನು. ಹೀಗೆ ಮಂತ್ರಿಗಳೆಲ್ಲರೂ ಒಂದೊಂದು ವಿಶೇಷ ಸಂಗತಿಯನ್ನು ಹೇಳಿದಮೇಲೆ ಒಂದು ಪಿಶಾಚವು ಎದ್ದು ನಿಂತುಕೊಂಡು ನಮಸ್ಕರಿಸಿ—' ಮಹಾ ಪ್ರಭೂ, ನನಗೆ ಬಹುದಿನಗಳಿಂದಲೂ ತಿಂಡಿಯಿಲ್ಲದೆ ಕೃಶವಾಗಿಹೋಗುತ್ತಿರುವೆನು, ಈ ಹಸಿವನ್ನು ಸಹಿಸಲಾರೆನು ಹೇಗಾದರೂ ತಿಂಡಿಯನ್ನು ಕೊಡಿಸಿಕೊಡಬೇಕು' ಎಂದು ಬೇಡಿಕೊಂಡಿತು

ಆ ಪಿಶಾಚದ ವಾಕ್ಯವನ್ನು ಕೇಳಿ ಭೇತಾಳನು-' ಅಹೋ ಭೂತವೇ, ಭೋಜರಾಜನ ಸಭೆಯಲ್ಲಿ ಓರ್ವ ಗೃಹಸ್ಥನು 'ಅಪ್ರುಶಿಖ' ಎಂಬ ನಾಲ್ಕು ಅಕ್ಷರಗಳಿಗೆ ಅರ್ಥವನ್ನು ಕೇಳಿರುವನು ಭೋಜರಾಜನು ಆ ಪ್ರಶ್ನೆಗೆ ಒಂದು ತಿಂಗಳಲ್ಲಿ ಉತ್ತರ ಹೇಳದಿದ್ದರೆ ಪಂಡಿತರಿಗೆಲ್ಲ ಶಿರಶ್ಛೇದನವು ಸಿದ್ಧವೆಂದು ಆಜ್ಞಾಪಿಸಿರುವನು. ಈ ನಾಲ್ಕು ಅಕ್ಷರಗಳಿಗೆ ಯಾರೂ ಅರ್ಥವನ್ನು ತಿಳಿದುಕೊಳ್ಳಲಾರದೆ ಹೋದರು. ಕಾಳಿದಾಸನಾದರೋ ವಿದೇಶಗಮನಮಾಡಿರುತ್ತಾನೆ. ಈ ದಿನಕ್ಕೆ ಸರಿಯಾಗಿ ೩೦ ದಿನಗಳ ಅವಧಿಯು ಮುಗಿದು ಹೋಗುತ್ತಿರುವುದು ಉದಯವಾಗುತ್ತಲೆ ಭೋಜರಾಜನು ಪಂಡಿತರ ಪ್ರಾಣಗಳನ್ನು ತೆಗೆಸಿಬಿಡುವನು. ಆದುದರಿಂದ ನಿನಗೆ ಯಥೇಷ್ಟವಾಗಿ ಆಹಾರವು ಲಭಿಸುವುದು ಹೋಗು' ಎಂದು ಉತ್ತರಕೊಟ್ಟನು

ಆ ಭೂತವು ಭೇತಾಳನನ್ನು ನೋಡಿ—' ಸ್ವಾಮಿ, ಆ ನಾಲು ಅಕ್ಷರಗಳ ಅರ್ಥವೇನೋ ಹೇಳಬೇಕು' ಎಂದು ವಿನಯವಾಗಿ ಪ್ರಾರ್ಥಿಸಿತು.

ಭೇತಾಳನು ' ಅಹೋ ಭೂತವೇ, ಆ ನಾಲ್ಕು ಅಕ್ಷರಗಳು ಒಂದು ಶ್ಲೋಕದ ನಾಲ್ಕುಪಾದಗಳ ಮೊದಲನೆಯ ಅಕ್ಷರಗಳಾಗಿರುವುವು. ಆ ಶ್ಲೋಕವಾವುದೆಂದರೆ ಇಲ್ಲಿ ಕೇಳು:—

" ಅನೇನ ತವ ಪುತ್ರಸ್ಯ<br>
ಪ್ರಸುಪ್ತಸ್ಯ ವನಾಂತರೆ,<br>
ಶಿಖಾಮಾದಾಯ ಹಸ್ತೇನ<br>
ಖಡ್ಗೇನೋಪಹತಂ ಶಿರಃ "

ನಿನ್ನ ಮಗನು ಅರಣ್ಯಮಧ್ಯದಲ್ಲಿ ನಿದ್ರಿಸುತ್ತಿರಲಾಗಿ ಇವನು ಆತನ ಜುಟ್ಟನ್ನು ಕೈಯಲ್ಲಿ ಹಿಡಿದುಕೊಂಡು ಖಡ್ಗದಿಂದ ತಲೆಯನ್ನು ಕತ್ತರಿಸಿದನು."

ಈ ಅಲ್ಪ ವಿಷಯವನ್ನು ಒಬ್ಬ ಪಂಡಿತನಾದರೂ ಹೇಳಲಾರದೆ ಹೋದನು-ಎಂದು ಆ ದಿನ ಭೂತಸಭೆಯನ್ನು ವಿಸರ್ಜಿಸಿದನು.

ಅದಕ್ಕೆ ಮುಂಚೆ ಮರದ ಕೊಂಬೆಯಮೇಲೆ ಕುಳಿತಿದ್ದ ಪಂಡಿತಪುತ್ರನು ಆ ಭೇತಾಳನ ವಾಕ್ಯಗಳನ್ನೆಲ್ಲ ಚೆನ್ನಾಗಿ ಕೇಳಿ, ಬೆಳಗಾಗುತ್ತಲೆ ಹಿಂದಿರುಗಿ ಮನೆಗೆ ಬಂದು ಬಹಳ ದೀನನಾಗಿದ್ದ ತಂದೆಯನ್ನು ನೋಡಿ—'ಅಪ್ಪಾ, ಪ್ರತಿ ದಿನದಂತಲ್ಲವೆ ಈ ದಿನವೇಕೋ ನಿನ್ನ ಮುಖವು ಬಾಡಿರುವುದು. ಇಂತಹ ಚಿಂತೆಗೆ ಕಾರಣವೇನು?' ಎಂದು ಕೇಳಲು, ತಂದೆಯು ಎಲ್ಲಾ ವೃತ್ತಾಂತವನ್ನೂ ಹೇಳಿದನು. ಮಗನು ಕೇಳಿ–ಜನಕಾ, ನೀನು ಚಿಂತಿಸಬೇಡ,ನನ್ನನ್ನು ಭೋಜನ ಸಭೆಗೆ ಕರೆದುಕೊಂಡು ಹೋಗು. ನಾನು ಆ ನಾಲ್ಕು ಅಕ್ಷರಗಳಿಗೆ ಅರ್ಥ ಹೇಳುತ್ತೇನೆ' ಎಂದು ಹೇಳಿದನು. ತಂದೆಯು ಈ ಮಾತನ್ನು ಕೇಳಿ, ಹುಡುಗನು ಅಜ್ಞಾನದಿಂದ ಕುಚೇಷ್ಟೆಗಾಗಿ ಹೇಳುತ್ತಾನೆಂದು ಸಭೆಗೆ ಕರೆದುಕೊಂಡು ಹೋಗಲು ಸಮ್ಮತಿಸಲಿಲ್ಲ. ಮಗನು ಹಠಮಾಡಿದುದರಿಂದ ಯತ್ನವಿಲ್ಲದೆ ಕರೆದುಕೊಂಡುಹೋಗಲು ಒಪ್ಪಿಕೊಂಡನು.

ತರುವಾಯ ಪಂಡಿತನೂ, ಆತನ ಪುತ್ರನೂ, ಮಿಕ್ಕ ಕವಿಗಳೂ ಕಲೆತು ಭೋಜರಾಜನ ಸಭೆಗೆ ಹೋದರು. ಭೋಜನು ಪಂಡಿತರೆಲ್ಲರನ್ನೂ ನೋಡಿ 'ಅಹೋ ಪಂಡಿತರೇ, ಆ ನಾಲ್ಕು ಅಕ್ಷರಗಳಿಗೆ ಏನು ಅರ್ಥಮಾಡಿರುವಿರಿ? ಹೇಳಿ' ಎಂದು ಕೇಳಿದನು. ಪಂಡಿತರೆಲ್ಲರೂ ತಲೆಗಳನ್ನು ಬಗ್ಗಿಸಿಕೊಂಡು ಲಜ್ಜಾಭಯಾನ್ವಿತರಾಗಿ ಸುಮ್ಮನಿದ್ದರು. ಆಗಲಾ ಪಂಡಿತಪುತ್ರನು ಧೈರ್ಯವಾಗಿ ಎದ್ದುನಿಂತು—'ಮಹಾ ಪ್ರಭೂ, ನಾನು ನಿಮ್ಮ ಪ್ರಶ್ನೆಗೆ ಉತ್ತರ ಹೇಳುತ್ತೇನೆ ಕೇಳಿರಿ, ಈ 'ಅಪ್ರಶಿಖ' ಎಂಬ ನಾಲ್ಕು ಅಕ್ಷರಗಳೂ ಒಂದು ಶ್ಲೋಕದ ನಾಲ್ಕು ಪಾದದ ಮೊದಲನೆಯ ನಾಲ್ಕು ಅಕ್ಷರಗಳು' ಎಂದು ಹೇಳಿ ಭೇತಾಳನು ಓದಿದ ಶ್ಲೋಕವನ್ನು ಪೂರ್ಣವಾಗಿ ಹೇಳಿದನು.

ಹದಿನಾರು ಸಂವತ್ಸರದ ಆ ಬಾಲನ ವಾಕ್ಯವನ್ನು ಕೇಳಿ, ಭೋಜರಾಜನೂ ಪಂಡಿತರೂ ಆಶ್ಚರ್ಯಗೊಂಡರು. 'ಈ ಬಾಲಕನು ಏನೂ ಓದಿದವನಲ್ಲ,

ಆದರೂ ಸುಲಭವಾಗಿ ಇಂತಹ ಕಠಿಣವಾದ ಪ್ರಶ್ನೆಗೆ ಉತ್ತರವನ್ನು ಹೇಳಿದುದರಿಂದ ಈತನು ಮಹಾ ಪುರುಷನಿರಬೇಕು' ಎಂದು ನಿಶ್ಚಯಿಸಿ, ಈ ಶ್ಲೋಕಕ್ಕೆ ಪ್ರಮಾಣವೇನಿರಬಹುದೆಂದಾಲೋಚಿಸಿ, ಆ ತರುಣನನ್ನು ಕುರಿತು-'ಬಾಬೂ, ನೀನು ಹೇಳಿದುದು ಸರಿಯಾದರೂ ಇದು ದಿಟವಾಗುವುದಕ್ಕೆ ಪ್ರಮಾಣವೇನು' ಎಂಬುದಾಗಿ ಭೋಜರಾಜನು ಕೇಳಿದನು.

ಪಂಡಿತಪುತ್ರನು 'ರಾಜೇಂದ್ರ, ಈ ನಾಲ್ಕು ಅಕ್ಷರಗಳನ್ನು ಯಾವನು ತಂದುಕೊಟ್ಟನೋ ಅವನನ್ನು ಇಲ್ಲಿಗೆ ಕರೆಸಿದರೆ ಸಪ್ರಮಾಣವಾಗಿ ನಿರೂಪಿಸಬಹುದು' ಎಂದು ಪ್ರತ್ಯುತ್ತರ ಹೇಳಿದನು

ಇದಕ್ಕೆ ಭೋಜನು ಸಮ್ಮತಿಸಿ, ಸುಶರ್ಮನನ್ನು ಸಭೆಗೆ ಕರೆಸಿದನು ದೋಷಿಯಾದ ಸುಶರ್ಮನ ಮುಖವು ಕಳಾಹೀನವಾಗಿದ್ದಿತು ಪಂಡಿತಕುಮಾರನು ನಡೆದ ಸಕಲ ವೃತ್ತಾಂತವನ್ನೂ ಹೊರಪಡಿಸಲು, ಆ ನೀಚನಾದ ಸುಶರ್ಮನು ಅಣ್ಣನನ್ನು ಕೊಂದುದುಂಟೆಂದು ಒಪ್ಪಿಕೊಂಡನು ಭೋಜಮಹಾರಾಜನು ಕ್ರೂರಕರ್ಮಿಯಾದ ಆ ಚಂಡಾಲ ಘಾತುಕನಿಗೆ ಮರಣದಂಡನೆಯನ್ನು ವಿಧಿಸಿ, ಈ ಪಂಡಿತಪುತ್ರನಿಗೆ ತನ್ನ ಆಸ್ಥಾನದಲ್ಲಿ ಕವಿಪದವಿಯನ್ನು ಅನುಗ್ರಹಿಸಿದನು. ಮಿಕ್ಕಕವಿಗಳೆಲ್ಲರೂ ಈತನು ತಮ್ಮ ಪ್ರಾಣದಾನಮಾಡಿದ ಉಪಕಾರವನ್ನು ಸ್ಮರಿಸುತ್ತ ಅತಿ ಮೈತ್ರಿಯಿಂದ ವರ್ತಿಸುತ್ತಿದ್ದರು

ಇತ್ತ ಭೇತಾಳನಿಂದಾಜ್ಞೆಯನ್ನು ಹೊಂದಿ ಬಂದಿದ್ದ ಭೂತವು ಬೆಳಗಾಗುವುದನ್ನೆ ನಿರೀಕ್ಷಿಸುತ್ತ-ಪಂಡಿತರನ್ನು ಯಾವಾಗ ಭುಂಜಿಸಿ ತೃಪ್ತಿಹೊಂದಲಿ ಎಂದು ಸ್ಮಶಾನದ ಬಳಿಯಣ ನರಿಯಂತೆ ಅತಿ ಸಂತೋಷವಾಗಿ ಕಾದಿದ್ದಿತು

ಇಷ್ಟರಲ್ಲಿಯೇ ಬೆಳಕು ಹರಿಯಿತು; ಹೊತ್ತು ಮೂಡಿತು, ಮಧ್ಯಾಹ್ನವಾಗಿ ಸಾಯಂಕಾಲವೂ ಆಯಿತು. ಆದರೆ ತಾನು ಕೋರಿದಂತೆ ಪಂಡಿತರನ್ನು ಭಕ್ಷಿಸುವ ವೇಳೆಯು ಮಾತ್ರ ಸನ್ನಿಹಿತವಾಗಲಿಲ್ಲ ಭೂತವು ನಿರಾಶೆಯಾಗಿ ಭೇತಾಳನ ಬಳಿಯನ್ನುನೇರಿ-'ಮಹಾ ಪ್ರಭೂ, ನಿನ್ನೆ ರಾತ್ರಿ ನನಗೆ ತೃಪ್ತಿಯಾಗುವಂತೆ ಆಹಾರವು ಸಿಕ್ಕುವುದೆಂದು ಹೇಳಿಕಳುಹಿಸಿದಿರಷ್ಟೆ. ಗೂಬೆಯಂತೆ ಕಾದುಕಾದು ಬೇಸತ್ತು ಹೋದೆನು. ಒಬ್ಬ ಮನುಷ್ಯನಾದರೂ

ಲಭಿಸಲಿಲ್ಲ' ಎಂದು ಮೊರೆಯಿಟ್ಟುಕೊಂಡಿತು. ಆ ಭೂತದ ಮಾತನ್ನು ಭೇತಾಳನು ಕೇಳಿ ಆಲೋಚಿಸಿ-'ಅಯ್ಯಾ, ನಿನ್ನೆ ನಾವು ಮಾತನಾಡುವಾಗ ವೃಕ್ಷದ ಮರೆಯಲ್ಲಿ ಓರ್ವ ಪಂಡಿತಪುತ್ರನು ಅಡಗಿದ್ದು, ಶ್ಲೋಕಾರ್ಥವನ್ನು ತಿಳಿದು ಅಲ್ಲಿ ಹೋಗಿ ಹೇಳಿ, ಪಂಡಿತರ ಮರಣವನ್ನು ತಪ್ಪಿಸಿರಬೇಕು ಆದು ದರಿಂದ ನಿನಗೆ ಆಹಾರ ದೊರೆಯಲಿಲ್ಲ' ಎಂದು ಹೇಳಿ ಭೇತಾಳನು ಅದಕ್ಕೆ ಬೇರೆ ಆಹಾರವನ್ನು ಕೊಡಿಸಿ ಸಭೆಯನ್ನು ವಿಸರ್ಜಿಸಿದನು.



## ಕಪಟ ಸನ್ಯಾಸಿಗಳು.

ಭೋಜಮಹಾರಾಜನ ಆಸ್ಥಾನದಲ್ಲಿ ನಾಲ್ಕು ನೂರು ಜನ ಪಂಡಿತ ಕವಿಗಳಿದ್ದರು ಆದರೆ ಅಷ್ಟು ಜನಗಳಲ್ಲಿಯೂ ಕಾಳಿದಾಸನೇ ಅತ್ಯಂತ ಶ್ರೇಷ್ಠ ನಾದ ಕವಿಯೂ, ವಿದ್ವಾಂಸನೂ ಆಗಿದ್ದನು ಈ ಕಾರಣದಿಂದಲೇ ಭೋಜರಾಜ ನು ಆತನನ್ನು ವಿಶೇಷವಾಗಿ ಗೌರವಿಸುತ್ತಿದ್ದನು.

ಇತರ ಪಂಡಿತಮಂಡಲಿಯಲ್ಲಿ ಓರ್ವ ತರುಣಕವಿಯು ಮಾತ್ರ ಉತ್ತಮ ವಿದ್ವಾಂಸನಾಗಿದ್ದನಾದರೂ ಕಾಳಿದಾಸನಿಗೆ ಸಮಾನವಾದ ಗೌರವವು ಲಭಿಸು ತ್ತಿರಲಿಲ್ಲ.

ಒಂದು ದಿನ ಆ ಪಂಡಿತಪುತ್ರನು ತನ್ನ ಮಿತ್ರರೊಡಗೂಡಿ ಏಕಾಂತ ದಲ್ಲಿ ಕುಳಿತು—"ಪ್ರಿಯಮಹಾಶಯರೇ, ನಾನೆಷ್ಟು ವಿದ್ಯಾಪ್ರೌಢಿಮೆಯನ್ನು ಪ್ರದರ್ಶಿಸಿದರೂ, ದೊರೆಯು ನನ್ನನ್ನು ಕಾಳಿದಾಸನ ಸಮವಾಗಿ ಗೌರವಿಸು ವುದಿಲ್ಲ. ಆದುದರಿಂದ ಯಾವುದಾದರೂ ಉಪಾಯದಿಂದ ಕಾಳಿದಾಸನನ್ನು ಹೊರಡಿಸಿದರೆ ಆಗ ನಾನು ಜಗದ್ವಿಖ್ಯಾತವಾದ ಕೀರ್ತಿಯನ್ನು ಗಳಿಸಬಹುದು. ಇದಕ್ಕೆ ನಿಮ್ಮ ಆಲೋಚನೆಯೇನು ಹೇಳಿರಿ" ಎಂದು ಕೇಳಿದನು.

ಆಗ ಓರ್ವ ಮಿತ್ರನು ಹೀಗೆ ಹೇಳಿದನು—"ಮಿತ್ರಾ, ಈ ಆಸ್ಥಾನದಲ್ಲಿ ಎಷ್ಟೋ ಜನ ಪಂಡಿತರಿರುವರು. ಅವರಲ್ಲಿ ಹತ್ತು ಮಂದಿ ಬಹು ವೃದ್ಧರು.

ಅವರನ್ನು ಸಂಸಾರದಿಂದ ವಿರಕ್ತರಾಗುವಂತೆ ಮಾಡಿ, ಕಾಶಿಗೆ ಹೋಗುವಂತೆ ಒಡಂಬಡಿಸಿ, ಅವರ ಸಂಗಡ ಕಾಳಿದಾಸನನ್ನೂ ಕಾಶಿಗೆ ಹೋಗುವಂತೆ ಮಾಡ ಬೇಕು. ಈ ಉಪಾಯವೇ ಸರ್ವೋತ್ತಮವಾಗಿ ಕಾಣುತ್ತದೆ" ಎಂದು ಹೇಳ ಲಾಗಿ, ಆ ಪಂಡಿತಪುತ್ರನು ಸಮ್ಮತಿಸಿ, ವೃದ್ಧ ಪಂಡಿತರ ಬಳಿಗೆ ಹೋಗಿ ಈ ಸಮಾಚಾರವನ್ನು ಹೇಳಿದನು. ಅವರಿಗೂ ಕಾಳಿದಾಸನ ಮೇಲೆ ಅಸೂಯೆ ಇದ್ದುದರಿಂದ ಹೇಗಾದರೂ ಕಾಳಿದಾಸನನ್ನು ಹೊರಹೊರಡಿಸುವುದಕ್ಕಾಗಿ ತಾವು ಸನ್ಯಾಸಿಗಳಾಗಲು ಒಪ್ಪಿಕೊಂಡರು.

ಬಳಿಕ ಏಳೆಂಟು ಜನ ವೃದ್ಧ ಪಂಡಿತರು ಸೇರಿ ಕಾಳಿದಾಸನ ಬಳಿಗೆ ಹೋಗಿ—"ಮಿತ್ರವರ್ಯಾ! ನಾವು ಬಹು ದಿನಗಳಿಂದಲೂ ಈ ಸಂಸಾರ ದಲ್ಲಿ ಬಿದ್ದು ಒದ್ದಾಡುತ್ತಾ, ಸ್ವಲ್ಪವಾದರೂ ಆತ್ಮವಿಚಾರವನ್ನು ಮಾಡದೆ ವ್ಯರ್ಥವಾಗಿ ಕಾಲವನ್ನು ಕಳೆದೆವು. ಇನ್ನಾದರೂ ನಮ್ಮ ಶರೀರದಲ್ಲಿ ಅಲ್ಪ ಸ್ವಲ್ಪ ಸಾಮರ್ಥ್ಯವು ಇರುವಾಗಲೇ ಕಾಶಿಗೆ ಹೋಗಿ ಆ ಪುಣ್ಯಸ್ಥಳದಲ್ಲಿ ಗಂಗಾ ನದೀ ತೀರದಲ್ಲಿ ಕಾಲಯಾಪನ ಮಾಡುವುದು ಶ್ರೇಯಸ್ಕರವು. ಈ ಸಂಸಾ ರವು ಅನಿತ್ಯವಾದುದಲ್ಲವೇ? ಇದರಲ್ಲಿ ಬಿದ್ದು ಒರಳಾಡುವುದಕ್ಕಿಂತಲೂ ನಿತ್ಯ ವಾದ ಮೋಕ್ಷವನ್ನು ಕೊಡುವ ವೇದಾಂತರಹಸ್ಯ ವಿಚಾರಮಾಡುವುದತ್ಯುತ್ತ ಮವು. ಆದುದರಿಂದ ನಾವೆಲ್ಲರೂ ಆಲೋಚಿಸಿ ನಾಳೆಯೇ ಕಾಶಿಗೆ ಹೋಗ ಬೇಕೆಂದು ನಿಶ್ಚಯಿಸಿರುತ್ತೇವೆ. ನಿನಗೂ ಸಮ್ಮತವಾಗಿದ್ದರೆ ನಾವೆಲ್ಲರೂ ಸೇರಿ ಭೋಜರಾಜನ ಅನುಮತಿಯನ್ನು ಪಡೆದು ಪ್ರಯಾಣ ಮಾಡೋಣ" ಎಂದು ಹೇಳಿದನು.

ಅತಿ ಮೇಧಾವಿಯಾದ ಕವಿರತ್ನ ಕಾಳಿದಾಸನು ಇದೆಲ್ಲವೂ ಕಪಟವೆಂದು ಅರಿತವನಾಗಿ, ಅದನ್ನು ಹೊರಪಡಿಸದೆ, ಅತ್ಯಂತ ಸಂತೋಷವನ್ನೇ ತೋರ್ಪ ಡಿಸಿ ಕಾಶಿಗೆ ಹೊರಡಲು ಸಮ್ಮತಿಸಿದನು.

ಮರುದಿನ ಅವರೆಲ್ಲರೂ ಸೇರಿ ಭೋಜಮಹಾರಾಜನ ಬಳಿಗೆ ಹೋಗಿ ತಮ್ಮ ಉದ್ದೇಶವನ್ನು ತಿಳಿಸಿದರು. ಭೋಜನು ಸಂತೋಷಪಟ್ಟು "ಆಹಾ! ಒಳ್ಳೆಯ ಸಂತೋಷಸಮಾಚಾರವನ್ನು ಕೇಳಿದೆನು. ಮಹಾ ವಿದ್ವಾಂಸರಾದ

ನಿಮಗೆ ಹೊರತು ಮತ್ತಾರಿಗೆ ಇಂತಹ ಪುಣ್ಯವುಲಭಿಸುವುದು ? ನೀವು ಸ್ವೇಚ್ಛೆಯಾಗಿ ಕಾಶಿಗೆ ಹೋಗಿ ಆ ಗಂಗಾತೀರ್ಥದಲ್ಲಿ ಮಿಂದು ಆನಂದಾತಿರೇಕದಿಂದ ಕಾಲವನ್ನು ಕಳೆಯಬಹುದು ಇಲ್ಲಿ ನಿಮ್ಮ ಪುತ್ರರು ಸಭಾಕಾರ್ಯವನ್ನು ನಿರ್ವಹಿಸಬಲ್ಲರು" ಎಂದು ಅನುಮತಿಯನ್ನು ಕೊಟ್ಟನು. ಆಗ ಪಂಡಿತರೆಲ್ಲರೂ ಸೇರಿ ಕಾಳಿದಾಸನೊಡಗೂಡಿ ಪ್ರಯಾಣಮಾಡಿ ಕೆಲವು ದಿನಗಳೊಳಗೆ ಕಾಶಿಯನ್ನು ಸೇರಿದರು. ಅಲ್ಲಿ ನೃಸಿಂಹಭಾರತಿಯೆಂಬ ಮಹಾ ಯೋಗಿಯ ದರ್ಶನವನ್ನು ಮಾಡಿಕೊಂಡು ಅವರಲ್ಲಿ ಓರ್ವ ಪಂಡಿತನು ನಮ್ಕರಿಸಿ ಕೈಜೋಡಿಸಿಕೊಂಡು ಹೀಗೆ ಪ್ರಾರ್ಥಿಸಿದನು—

'ಅಹೋ ಮಹಾನುಭಾವಾ, ಎಷ್ಟು ಪುಣ್ಯಮಾಡಿಯೋ ಈಗ ನಮಗೆ ಮಹಾಸ್ವಾಮಿಯವರ ದರ್ಶನವು ಲಭಿಸಿತು ! ನಾವು ಇಂದಿಗೆ ಧನ್ಯರಾದೆವು' ಎನ್ನಲು ನೃಸಿಂಹಭಾರತಿಯು ಅವರ ಪ್ರಾರ್ಥನೆಗೆ ಪ್ರಸನ್ನನಾಗಿ—'ಪಂಡಿತರೇ, ನಿಮ್ಮ ಕೋರಿಕೆಯೇನೋ ವಿಸ್ತಾರವಾಗಿ ತಿಳಿಸಿ' ಎಂದು ಕೇಳಿದನು. ಆಗಲಾ ಪಂಡಿತರು—

"ಸ್ವಾಮಿಾ, ಸಂಸಾರದಿಂದ ವಿರಕ್ತರಾಗಿ ನಿಮ್ಮ ಪಾದಪದ್ಮಗಳನ್ನಾಶ್ರಯಿಸಿ ಸನ್ಯಾಸವನ್ನು ಸ್ವೀಕರಿಸಬೇಕೆಂದು ಬಂದಿರುವೆವು. ನಮ್ಮನ್ನು ಅನುಗ್ರಹಿಸಬೇಕು" ಎಂದು ಬೇಡಿಕೊಂಡರು

ನೃಸಿಂಹಾಚಾರ್ಯರು "ಅಹೋ ಪಂಡಿತರೇ ನಿಮಗೆ ಸನ್ಯಾಸಿಗಳಾಗುವ ಕೋರಿಕೆ ಇದ್ದರೆ ಆಗಬಹುದು. ಆದರೆ ಎಲ್ಲರೂ ಒಂದೇ ದಿನ ಕಾಷಾಯವನ್ನು ಧರಿಸುವುದು ಸಮಂಜಸವಲ್ಲವು. ಒಬ್ಬೊಬ್ಬರು ಒಂದೊಂದು ದಿನ ಸನ್ಯಾಸವನ್ನು ತೆಗೆದುಕೊಳ್ಳುವುದು ಯುಕ್ತವಾಗಿರುವುದು" ಎಂದುಹೇಳಿದನು.

ಪಂಡಿತರು ಇದಕ್ಕೆ ಸಮ್ಮತಿಸಿ ಗುರುವಿಗೆ ನಮಸ್ಕರಿಸಿ ಹೊರಟುಹೋಗಿ ಒಂದು ಕಡೆ ಎಲ್ಲರೂ ಸೇರಿ "ಮೊದಲು ಯಾರು ಯೋಗ್ಯರು ?" ಎಂದು ಆಲೋಚಿಸುವಾಗ ಕಪಟರೀತಿಯಿಂದ ಕಾಳಿದಾಸನನ್ನು ಸನ್ಯಾಸಿಯಾಗಿ ಮಾಡಲೆಳಸಿ ಬಂದವರಾದುದರಿಂದ ಅವರಲ್ಲಿ ಓರ್ವ ಪಂಡಿತನು —"ಮಿತ್ರರೇ, ನಮ್ಮೆಲ್ಲರಲ್ಲಿ ಕಾಳಿದಾಸನೇ ಸರ್ವಶ್ರೇಷ್ಠನು, ಈತನೇ ಪ್ರಥಮದಲ್ಲಿ ಸನ್ಯಾಸ

ವನ್ನು ವಹಿಸಿದರೆ ಬಹು ಚೆನ್ನಾಗಿರುವುದು" ಎಂದುಹೇಳಲು ಎಲ್ಲರೂ ಅದಕ್ಕೆ ಒಪ್ಪಿಕೊಂಡರು

ಕಾಳಿದಾಸನು ಇದನ್ನು ಕೇಳಿ ಮೊದಲು ನನಗಿಂತಲೂ ವಯೋವೃದ್ಧರೂ ಜ್ಞಾನವೃದ್ಧರೂ ಆದ ನೀವುಗಳು ಸನ್ಯಾಸವನ್ನು ಸ್ವೀಕರಿಸಿ ಮೇಲ್ಪಂಙ್ತಿಯನ್ನು ಹಾಕುವುದೇ ಸರ್ವೋತ್ತಮವಾದುದೆಂದು ಹೇಳಿದನು.

ಆ ಮರುದಿನ ಓರ್ವ ಪಂಡಿತನು ಸನ್ಯಾಸವನ್ನು ತೆಗೆದುಕೊಳ್ಳುವುದಕ್ಕಾಗಿ ನೃಸಿಂಹಭಾರತಿ ಸ್ವಾಮಿಯಬಳಿಗೆ ಬಂದು ನಮಸ್ಕರಿಸಲಾಗಿ ಆತನು ನಿನ್ನ ಕೋರಿಕೆಯೇನೆಂದು ಕೇಳಿದುದಕ್ಕೆ ಮೊದಲನೆಯ ಪಂಡಿತನು ತನ್ನ ಮನೋಗತವನ್ನು ಹೊರಪಡಿಸಲೆಳಸಿ ಎರಡು ಕೈಗಳನ್ನೆತ್ತಿ ಈ ರೀತಿಯಾಗಿ ಗಂಭೀರಧ್ವನಿಯಿಂದ ನುಡಿದನು

ಶ್ಲೋ॥ "ಕದಾವಾರಾಣಸ್ಯಾಮಮರತಟಿನೀ ರೋಧಸಿ ವಸನ್ |
ವಸಾನಃ ಕೌಪೀನಂ ಶಿರಸಿನಿದಧಾನೋಂಜಲಿಪುಟಂ ||
ಅಯೇ ಗೌರೀನಾಥ ತ್ರಿಪುರಹರ ಶಂಭೋ ತ್ರಿನಯನ |
ಪ್ರಸೀದೇತ್ಯಾಕ್ರೋಶನ್ನಿಮಿಷಮಿವನೇಷ್ಯಾಮಿ ದಿವಸಾನ್ ||"

ಕಂ|| ವರಕಾಶೀಕ್ಷೇತ್ರದೊಳೀ |
ಸುರಧುನಿತೀರದೊಳು ವಿಶ್ವನಾಥಾಲಯದೋಳ್ ||
ಧರಿಸುತೆ ಕೌಪೀನವ ನಾಂ |
ಹರಗೌರೀವರಯೆನುತ್ತಮಿಹುದಿನ್ನೆಂದೋ ||

"ಈ ಕಾಶೀಕ್ಷೇತ್ರದಲ್ಲಿ ವಿಶ್ವನಾಥನ ಆಲಯದಹತ್ತಿರ ಗಂಗಾತೀರದಲ್ಲಿ ವಾಸಿಸುತ್ತಾ ಕೌಪೀನವನ್ನು ಧರಿಸಿ, ಎರಡು ಕೈಗಳನ್ನೂ ತಲೆಯಮೇಲಿಟ್ಟುಕೊಂಡು 'ಅಹೋ ಗೌರೀನಾಥಾ, ತ್ರಿಪುರಹರಾ, ಶಂಭೂ, ತ್ರಿನಯನಾ, ಪ್ರಸನ್ನನಾಗು' ಎಂದು ಪ್ರಾರ್ಥಿಸುತ್ತ ದಿನಗಳನ್ನು ನಿಮಿಷಗಳಂತೆ ಯಾವಾಗ ಕಳೆಯಲಾದೀತು ಎಂಬುವುದೇ ನನ್ನ ಕೋರಿಕೆಯು ಎಂದು ಹೇಳಿದನು"

ಹೀಗೆ ಆರ್ತನಾಗಿ ನುಡಿದ ಆ ಪಂಡಿತನಿಗೆ ಗುರುವು ಸನ್ಯಾಸವನ್ನು ಕೊಟ್ಟನು.

ಎರಡನೆಯ ದಿನ ಇದೇ ರೀತಿಯಾಗಿ ಮತ್ತೊಬ್ಬ ಪಂಡಿತನು ನರಸಿಂಹ ಭಾರತಿಸ್ವಾಮಿಗಳ ಬಳಿಗೆ ಬಂದು ನಮಸ್ಕರಿಸಲಾಗಿ ಗುರುವು ನಿನ್ನ ಕೋರಿಕೆ ಯೇನಿರುವುದು? ಎಂದು ಕೇಳಿದನು ಆ ಪಂಡಿತನು ಎರಡು ಕೈಗಳನ್ನು ಮೇಲಕ್ಕೆತ್ತಿ ಉಚ್ಚಸ್ವರದಿಂದ ಹೀಗೆ ಹೇಳಿದನು—

ವೃ|| "ಕದಾಬೃಂದಾರಣ್ಯೇ ವಿಮಲ ಯಮುನಾತೀರಪುಲಿನೇ
ಚರಂತಂ ಗೋವಿಂದಂ ಹಲಧರಸುದಾಮಾದಿ ಸಹಿತಂ ||
ಅಯೇ ಕೃಷ್ಣಸ್ವಾಮಿನ್ ಮದನಮುರಳೀವಾದನ ವಿಭೋ
ಪ್ರಸೀದೇತ್ಯಾಕ್ರೋಶನ್ನಿಮಿಷಮಿವನೇಷ್ಯಾಮಿ ದಿವಸಾನ್ ||"

ಸಿ||॰ ಬೃಂದಾವನಾರಣ್ಯಪ್ರಾಂತದೊಳಂದದ
ಚಂದದ ಯಮುನೆಯ ತೀರದಲ್ಲಿ
ಬಂಧುರವಾಗಿಹ ಮರಳಿನ ದಿಣ್ಣೆಯೊಳ್
ನಂದಾತ್ಮಜಾತ ಗೋವಿಂದನೊಡನೆ
ಹಿಂಗಡೆಯೊಳು ಬಲರಾಮ ಸುದಾಮರು
ಬಂದಾಟವಾಟಗಳಾಡುತಿರಲು
ಇಂದಿರಾರಮಣನ ಮುಚುಕುಂದವರದನ
ಮಂದರಧರನ ಸಾನಂದದಿಂದ

ಗೀ|| ನಿಂದು ಕೃಷ್ಣ ಮುರಾಂತಕ ಮುರಳಿಗಾನ
ವಿಂದು ಬೀರುತೆ ಮೋಹನಮೂರ್ತಿ ತೋರು
ಎಂದು ಪೊಗಳುತ ದಿನಗಳನಿಲ್ಲಿ ನಾನು
ಒಂದು ನಿಮಿಷದ ತೆರದೊಳು ಕಳೆಯಬೇಕೈ

"ಸ್ವಾಮಿನ್! ಬೃಂದಾವನಕ್ಕೆಹೋಗಿ ಅಲ್ಲಿ ಯಮುನಾನದಿಯ ಬಳಿದಾದ ಮರಳಿನ ದಿಣ್ಣೆಯಮೇಲೆ ಬಲರಾಮ ಸುದಾಮ ಮೊದಲಾದವರೊಡಗೂಡಿ ಆಡುತ್ತ ಪಾಡುತ್ತ ಕ್ರೀಡಿಸುವ ಕೃಷ್ಣನನ್ನು 'ಅಹೋ ಕೃಷ್ಣಸ್ವಾಮಿ, ಜಗನ್ಮೋಹನನಾಗಿ ಮುರಳಿಯನ್ನು ಬಾರಿಸುತ್ತಿರುವ ಮಹಾನುಭಾವಾ ಅನುಗ್ರಹಿಸು' ಎಂದು ಪ್ರಾರ್ಥಿಸುತ್ತ ಬಹುದಿನಗಳನ್ನು ಒಂದು ನಿಮಿಷವಾಗಿ ಎಂದಿಗೆ ಕಳೆಯುವೆನೊ ಎಂಬುದಾಗಿ ತವಕಿಸುವೆನು"

ಈ ರೀತಿ ಹೇಳಿದ ಆ ಪಂಡಿತನಿಗೆ ಸನ್ಯಾಸವನ್ನು ಕೊಟ್ಟನು.

ಇದಾದಮೇಲೆ ಮೂರನೆಯದಿನ ಮೂರನೆಯ ಪಂಡಿತನು ಬಂದು ಗುರುಗಳಿಗೆ ನಮಸ್ಕರಿಸಿದನು. ಆತನನ್ನೂ ನಿನ್ನ ಕೋರಿಕೆಯೇನೆಂದು ಕೇಳಲು ಈ ರೀತಿ ಹೇಳಿದನು---

ಶ್ಲೋ|| "ಕಧಾವಾ ಸಾಕೇತೇ ವಿಮಲ ಸರಯೂತೀರ ಪುಲಿನೇ
ಚರಂತಂ ಶ್ರೀರಾಮಂ ಜನಕತನಯಾ ಲಕ್ಷ್ಮಣಯುತಂ
ಅಯೇ ರಾಮಸ್ವಾಮಿನ್ ಜನಕತನಯಾವಲ್ಲಭ ವಿಭೋ
ಪ್ರಸೀದೇತ್ಯಾಕ್ರೋಶ ನ್ನಿಮಿಷಮಿವನೇಷ್ಯಾಮಿ ದಿವಸಾನ್"

ಸೀ|| ವರತರಸಾಕೇತಪುರದ ಸಮೀಪದಿ
ಸರಯೂನದೀ ಮಹಾತೀರದಲ್ಲಿ
ಗುರುತರ ಪುಲಿನದಿ ಚರಿಸುವ ರಾಮನು
ನಿರುತ ಲಕ್ಷ್ಮಣ ಜಾನಕಿಯನುಕೂಡಿ
ನರವರರೂಪ ಶ್ರೀವರ ಮಹಾಮಹಿಮನೆ
ಕರುಣಿಸು ಕರುಣಿಸೆಂದೆನುತಲಾನು
ಹರುಷದಿ ಕರಗಳ ಮುಗಿಯುತಲನುದಿನ
ಶಿರವನು ಬಾಗಿ ನಾಂ ನವಿಪುದೆಂದೊ

ಗೀ|| ತ್ವರಿತ ನೀನದ ನರುಹುವುದಾರ್ಯವರ್ಯ
ತರಳನೆಂದರಿತೆನ್ನೊಳು ಮರುಕವಿಟ್ಟು
ಗುರುವರನೆ ತವಕಿಸುವುದು ಎನ್ನ ಮನವು
ಹೊರತು ಬೇರೆನಗಿಲ್ಲವು ಬಯಕೆ ದೇವ

"ಅಯೋಧ್ಯೆಗೆ ಹೋಗಿ ಅಲ್ಲಿನ ಸರಯೂನದೀತೀರದಲ್ಲಿ ಮರಳಿನದಿಣ್ಣೆಯಲ್ಲಿ ವಿಲಾಸವಾಗಿ ಸೀತಾಲಕ್ಷ್ಮಣ ಸಹಿತವಾಗಿಸಂಚರಿಸುವ ಶ್ರೀರಾಮಚಂದ್ರನನ್ನು 'ಅಹೋ ರಾಮಚಂದ್ರಾ, ಸ್ವಾಮಿ, ಸೀತಾಪತೇ, ಮಹಾಪ್ರಭೂ ಅನುಗ್ರಹಿಸು! ಅನುಗ್ರಹಿಸು!' ಎಂದು ಪ್ರಾರ್ಥಿಸುತ್ತ ದಿನಗಳನ್ನು ನಿಮಿಷದಂತೆ ಎಂದು ಕಳೆಯುವೆನೋ ಎಂಬುದಾಗಿ ಆತುರಪಡುವೆನು."

ಈ ಮಾತನ್ನು ಕೇಳಿ ಆ ಪಂಡಿತನಿಗೆ ಗುರುವು ದೀಕ್ಷೆಯನ್ನು ಕೊಟ್ಟನು.

ನಾಲ್ಕನೆಯದಿನ ನಾಲ್ಕನೆಯ ಪಂಡಿತನು ಸನ್ಯಾಸವನ್ನು ತೆಗೆದುಕೊಳ್ಳುವುದಕ್ಕಾಗಿ ಬಂದು, ಗುರುವಿಗೆ ನಮಸ್ಕರಿಸಿ ನಿಂತುಕೊಳ್ಳಲಾಗಿ ಎಂದಿನಂತೆ ನಿನ್ನ ಬಯಕೆಯೇನೆಂದು ಗುರುವು ಕೇಳಿದುದಕ್ಕೆ ಆ ಪಂಡಿತನು ಈ ರೀತಿಯಾಗಿ ನುಡಿದನು—

ಶ್ಲೋ|| " ಕದಾ ಶ್ರೀಮನ್ನೀರಾ ನರಹರಿಪುರೇ ಸಿಂಹವದನಂ
ಹರಿಂಪಶ್ಯನ್ನುಚ್ಚೈರ್ಮುದಿತ ಮನಸಾದೀನದಯಿನಂ
ಅಯೇ ಲಕ್ಷ್ಮೀಕಾಂತ ಶ್ರಿತಜನ ಭಯಾರ್ತೇ ನರಹರೇ
ಪ್ರಸೀದೇತ್ಯಾಕ್ರೋಶನ್ನಿಮಿಷಮಿವನೇಷ್ಯಾಮಿ ದಿವಸಾನ್ "

ಕಂ|| ನೀರಾ ನರಹರಿಪುರದೊಳ್ |
ತೋರುವ ಸಿಂಹಾಸ್ಯನಾದ ದೇವನ ಮುಪದಿಂ ||
ಬಾರ ಮುರಾರಿ ವಿಚಾರಿಸು |
ಕಾರುಣಿಕನೆಯೆನ್ನನೆಂಬ ದಿನಪಂ ಬಯಿಪೇಂ ||

" ಶ್ರೀ ನೀರಾನರಹರಿಪುರದಲ್ಲಿ ದೀನದಯಾಳುವೂ, ಸಿಂಹಾಸ್ಯನೂ, ಭಗವಂತನೂ ಆದ ಶ್ರೀ ನೃಸಿಂಹಸ್ವಾಮಿಯನ್ನು ಸಂತೋಷವಾಗಿ ' ಅಹೋ ಲಕ್ಷ್ಮೀನಾಥಾ, ಶ್ರಿತಜನಾರ್ತಿಹರಾ, ನರಹರೀ, ಅನುಗ್ರಹಿಸು ' ಎಂದು ಉಚ್ಚಸ್ವರದಿಂದಪ್ರಾರ್ಥಿಸುತ್ತ ದಿನವನ್ನು ನಿಮಿಷದಂತೆ ಎಂದಿಗೆ ಕಳೆಯುವೆನೊ ಎಂದು ನನ್ನ ಮನಸ್ಸು ತವಕಿಸುವುದು."

ಎಂದು ದೈನ್ಯಭಾವದಿಂದ ನುಡಿದ ಪಂಡಿತನಿಗೆ ಗುರುವು ಸನ್ಯಾಸವನ್ನು ಕೊಟ್ಟನು.

ಐದನೆಯ ದಿನ ಐದನೆಯ ಪಂಡಿತನು ಬಂದು, ನಮಸ್ಕರಿಸಿ ನಿಂತುಕೊಂಡನು. ಆಗಲಾ ಗುರುವು " ಅಯ್ಯಾ ಪಂಡಿತನೇ, ನಿನ್ನ ಕೋರಿಕೆಯೇನಿರುವುದು " ಎಂದು ಕೇಳಲು ಆತನು ಹೀಗೆ ಹೇಳಿದನು—

ಶ್ಲೋ|| " ಕದಾ ಪ್ರೇಮೋದ್ಗಾರೈಃ ಪುಲಕಿತತನುಃ ಸಾಶ್ರುನಯನಃ
ಸ್ಮರನ್ನುಚ್ಚೈಃ ಪ್ರೀತ್ಯಾ ಶಿಥಿಲಹೃದಯೋ ಗದ್ಗದಗಿರಾ
ಅಯೇ ಶ್ರೀಮನ್ಸಿಷ್ಟೋ ರಘುವರಯದೂತ್ತಂಸನೃಹರೇ
ಪ್ರಸೀದೇತ್ಯಾಕ್ರೋಶನ್ನಿಮಿಷಮಿವನೇಷ್ಯಾಮಿ ದಿವಸಾನ್ "

ಕಂ|| ಅನವರತ ಭಕ್ತಿಯುತನುಂ |
ತನುಪುಳುಕಾಂಕಿತನು ಸಾಸ್ಯನಯನನೆನುತ್ತಂ ||
ನೆನೆದು ಹರಿವಿಷ್ಣುವೆನ್ನುತೆ |
ದಿನಗಳ ನಾಂ ನಿಮಿಷದಂತೆ ಕಳೆವೆನದೆಂದೋ ||

"ಅನವರತವೂ ಭಕ್ತಿ ಪಾರವಶ್ಯದಿಂದ ಶರೀರವೆಲ್ಲವೂ ಪುಲಕಾಂಕಿತವಾಗಲು, ಕಣ್ಣುಗಳಿಂದ ಆನಂದಾಶ್ರುಗಳುದುರುತ್ತಿರಲು ಕೇವಲ ಶಿಥಿಲವಾದ ಹೃದಯದಿಂದ ಗದ್ಗದಸ್ವರಯುಕ್ತವಾಗಿ ನಿರತಿಸಯ ಪ್ರೀತಿಯೊಡನೆ 'ಅಹೋ ವಿಷ್ಣೋ, ರಘುವೀರಾ, ಯದೂತ್ತಂಸಾ, ನರಹರೀ, ಅನುಗ್ರಹಿಸು' ಎಂದುದಾಗಿ ಹೊಗಳುತ್ತ ಅನೇಕ ದಿವಗಳನ್ನು ಒಂದು ನಿಮಿಷದಂತೆ ಯಾವಾಗ ಕಳೆಯುವೆನೋ ಎಂದು ತವಕಿಸುವೆನು ಇದೇ ನನ್ನ ಕೋರಿಕೆಯೆಂದು ಹೇಳಿದನ."

ಈ ಮಾತಿಗೆ ಗುರುವು ಸಂತೋಷಗೊಂಡವನಾಗಿ ಆ ಪಂಡಿತನಿಗೆ ಸನ್ಯಾಸವನ್ನು ಕೊಟ್ಟನು.

ತದನಂತರ ಆರನೆಯ ದಿವಸ ಆರನೆಯ ಪಂಡಿತನು ಬಂದು ಯಥಾರೀತಿಯಾಗಿ ನಮಸ್ಕರಿಸಿದನು. ಗುರುವು ಪದ್ಧತಿಯಂತೆ ನಿನ್ನ ಬಯಕೆಯೇನೆಂದು ಕೇಳಲು ಆತನೀರೀತಿ ಹೇಳಿದನು—

ಶ್ಲೋ|| "ಕದಾಸೀತಾಶೋಕ ತ್ರಿಶಿಖ ಜಲದಂಚಾಂಜನಿಸುತಂ
ಚಿರಂಜೀವಂ ಲೋಕೇ ಭಜಕಜನ ಸಂರಕ್ಷಣಕರಂ
ಅಯೇ ವಾಯೋಸ್ಸೂನೋ ರಘುವರ ಪದಾಂಭೋಜಮಧುಪ
ಪ್ರಸೀದೇತ್ಯಾಕ್ರೋಶನ್ನಿಮಿಷಮಿವನೇಷ್ಯಾಮಿದಿವಸಾನ್"

ಕಂ|| ಸೀತಾಶೋಕಾನಲ ಸಂ |
ಜಾತ ಮಹಾ ಮೇಘನಂ ಸುಚಿರಜೀವಿತನಂ ||
ವಾತಾತ್ಮಜ ಸಿರಿರಘುವ |
ದೂತ ಎನುತ್ತೆಣಿಪ ದಿವಸವೇಗಳೊ ಕಾಣೆಂ ||

"ಲಂಕಾಪಟ್ಟಣದಲ್ಲಿ ರಾವಣನಿಂದ ಸೆರೆಯಿಡಲ್ಪಟ್ಟ ಸೀತಾದೇವಿಯ ದುಃಖವೆಂಬ ಅಗ್ನಿಗೆ ಮೇಘದಂತಿರುವವನೂ, ಸರ್ವಕಾಲದಲ್ಲಿಯೂ ಜೀವಿಸಿರುವವನೂ, ಆಶ್ರಿತ ಜನರನ್ನು

ಅತಿ ದಯಾರಸದಿಂದ ಪರಿಪಾಲಿಸುವವನೂ ಆದ ಆಂಜನೇಯನನ್ನು 'ಅಹೋ ವಾಯುಕುಮಾರ, ಶ್ರೀರಾಮಪಾದಕಮಲಭ್ರಮರಾ, ಹನುಮಂತಾ ಅನುಗ್ರಹಿಸು' ಎಂದು ಕೆತ್ತೆತ್ತಿದಿ ನಾಲಾಪದಿಂದ ಪ್ರಾರ್ಥಿಸುತ್ತಾ ಅನೇಕ ದಿನಗಳನ್ನು ಒಂದು ನಿಮಿಷದಂತೆ ಯಾವಾಗ ಕಳೆಯುವೆನೋ ಎಂದು ನನ್ನ ಮನಸ್ಸು ಆತುರಪಡುವುದು ಎಂದು ಹೇಳಿದನು"

ಈ ರೀತಿಯಾಗಿ ಹತ್ತು ದಿನಗಳೂ ಹತ್ತುಮಂದಿ ಪಂಡಿತರು ಸನ್ಯಾಸಿಗಳಾದರು.

ಕೊನೆಯದಿನ ಕಾಳಿದಾಸನು ತನ್ನ ಕಪಟಾಭಿಪ್ರಾಯವನ್ನು ಯಾರಿಗೂ ತಿಳಿಯಗೊಡದೆ ನಿಜವಾಗಿ ಸನ್ಯಾಸವನ್ನು ತೆಗೆದುಕೊಳ್ಳುವವನಂತೆ ನಟಿಸುತ್ತ ನೃಸಿಂಹಭಾರತೀಸ್ವಾಮಿಯ ಬಳಿಗೆ ಬಂದು ಅತಿ ಭಕ್ತಿಯಿಂದ ನಮಸ್ಕರಿಸಿದನು. ಗುರುವು—"ಅಯ್ಯಾ, ನಿನಗೇನು ಇಷ್ಟವಿರುವುದು ಹೇಳು" ಎಂದು ಕೇಳಿದನು ಕಾಳಿದಾಸನು ಆಲೋಚಿಸಿ ಚಮತ್ಕಾರವಾಗಿ ಹೀಗೆ ಹೇಳಿದನು—

ಶ್ಲೋ|| "ಕದಾ ಕಾಂತಾಗಾರೇ ಪರಿಮಳವಿತತ್ಪುಷ್ಪಶಯನೇ
ಶಯಾನಃ ಶ್ಯಾಮಾಯಾಃ ಕುಚಯುಗಮುಪಂ ವಕ್ಷಸಿ ವಹನ್
ಅಯೋ ಸ್ನಿಗ್ಧೇ ಮುಗ್ಧೇ ಚಪಲನಯನೇ ಚಂದ್ರವದನೇ
ಪ್ರಸೀದೇತ್ಯಾಕ್ರೋಶನ್ನಿಮಿಷಮಿವನೇಷ್ಯಾಮಿ ದಿವಸಾನ್"

ಕಂ|| ತರುಣಿಯೊಡಗೂಡಿ ಯಂತಃ |
ಪುರದೊಳಗಾ ಕುಸುಮಶಯನದೊಳ್ ಪವಡಿಸಿ ಸುಂ ||
ದರಿ ಶಶಿಮುಖಿ ಸುಖಿ ಭಾಮಿನಿ,
ಹರಿಣಾಕ್ಷಿ ಯೆನುತ್ತೆ ದಿನವ ಕಳೆವೆನದೆಂದೋ ||

ಮಹಾಶಯಾ, ಪ್ರಿಯಮನೋಹರಿಯ ಅಂತಃಪುರದಲ್ಲಿ ಮಘಮಘಿಸುವ ವಾಸನೆಗಳುಂಟಾಗಿರಲು ವಕ್ಷಸ್ಥಲದ ಮೇಲ್ಭಾಗದಲ್ಲಿ ಪ್ರಿಯಳನ್ನು ಸ್ಪರ್ಶಮಾಡುತ್ತ ಮಲಗಿದ್ದು ಆನಂದದಿಂದ 'ಸುಂದರೀ, ಚಂದಿರೇ, ಚಪಲಾಕ್ಷೀ, ಮೀನಾಕ್ಷೀ ಅನುಗ್ರಹಿಸು' ಎಂದು ಹೇಳುತ್ತ ಬಹುಕಾಲವನ್ನು ಒಂದು ನಿಮಿಷವಾಗಿ ಎಂದು ಕಳೆಯುವೆನೋ ಎಂಬುದಾಗಿ ನನ್ನ ಮನಸ್ಸು ತವಕಿಸುತ್ತಿರುವುದು."

ಹೀಗೆ ನುಡಿದ ನುಡಿಯನ್ನು ಆ ಭಾರತೀಸ್ವಾಮಿಯು ಕೇಳಿ "ಅಹೋ ಪಂಡಿತನೇ, ನಿನ್ನ ಮನಸ್ಸಿನ್ನೂ ಪರಿಪಕ್ವವಾಗಿಲ್ಲ. ನೀನು ವಿಷಯವಾಸನೆ

ಗಳಿಂದ ವಿಮುಖನಾಗಿಲ್ಲ. ವೈರಾಗ್ಯವು ಜನಿಸಲಿಲ್ಲ. ಆದುದರಿಂದ ನಿನಗೆ ತುರೀಯಾಶ್ರಮಾಧಿಕಾರವಿಲ್ಲ. ನಾನು ನಿನಗೆ ಈಗ ಸನ್ಯಾಸವನ್ನು ಕೊಡಲಾರೆನು; ಹಿಂದಿರುಗಿ ಹೋಗು” ಎಂದು ಹೇಳಿದನು.

ರಸಿಕಶಿಖಾಮಣಿಯಾದ ಕಾಳಿದಾಸನು ಇದನ್ನು ಕೇಳಿ—“ಸ್ವಾಮಿ, ನಾನು ತಮ್ಮಿಂದ ಸನ್ಯಾಸವನ್ನು ತೆಗೆದುಕೊಳ್ಳುತ್ತೇನೆಂದು ಆ ಪಂಡಿತರಲ್ಲಿ ಹೇಳಿದ್ದೆನು. ಆ ಮಾತನ್ನು ಈಗ ಹೇಗೆ ನಿವಾರಲಿ? ನನ್ನನ್ನು ಅಸತ್ಯವಾದಿಯಾಗಿ ಮಾಡುವಿರಾ? ಎಂದು ಯತಿಯನ್ನು ಕೇಳಿದನು. ‘ಕವೀಶ್ವರಾ ಅದೆಲ್ಲಾ ನನಗೆ ತಿಳಿಯದು, ನಿನಗೆ ಸನ್ಯಾಸವನ್ನು ಸ್ವೀಕರಿಸಬೇಕೆಂಬ ಬಯಕೆಯಿದ್ದಲ್ಲಿ ಮತ್ತೊಬ್ಬ ಯತಿಯಬಳಿಗೆ ಹೋಗಿ ಪರಿಗ್ರಹಿಸು, ಕೆಡುಕರಿಗೆ ನಾನು ಸನ್ಯಾಸವನ್ನು ಕೊಡುವುದಿಲ್ಲ” ಎಂದು ಗುರುವು ಹೇಳಲಾಗಿ ಕಾಳಿದಾಸನು “ನೀವು ಸನ್ಯಾಸವನ್ನು ಕೊಡದಿರುವ ಪಕ್ಷದಲ್ಲಿ ಮತ್ತೊಬ್ಬರಿಂದ ನಾನು ಸನ್ಯಾಸವನ್ನು ತೆಗೆದುಕೊಳ್ಳಲಾರೆನು. ನಾನೀ ಪಂಡಿತರ ಹತ್ತಿರ ಪ್ರತಿಜ್ಞೆ ಮಾಡಿದೆನು. ಅದು ಈಗ ಹೇಗೆ ಭಿನ್ನವಾಗಬಹುದು?’ ಎನ್ನಲು ಆ ಯತಿಯು “ಅಯ್ಯಾ, ನೀನು ಸನ್ಯಾಸವನ್ನು ತೆಗೆದುಕೊಳ್ಳುವೆಯಾದರೂ ನಾನು ಕೊಡುವುದಿಲ್ಲವಾದುದರಿಂದ ಇದರಲ್ಲಿ ನಿನ್ನ ದೋಷವೇನೂ ಇಲ್ಲವು” ಎಂದು ಬದಲು ಹೇಳಿದನು.

ಕಾಳಿದಾಸನು ಸಂತೋಷಿಸಿ, ನೂತನ ಸನ್ಯಾಸಿಗಳಾದ ಪಂಡಿತರಲ್ಲಿ ‘ಮಿತ್ರರೇ, ಗುರುಗಳು ಅಪ್ಪಣೆಕೊಡಿಸಿದ ವಿಷಯವನ್ನು ಕೇಳಿದಿರಷ್ಟೇ! ಇದರಲ್ಲಿ ನನ್ನದೇನೂ ದೋಷವಿಲ್ಲವು! ನಿಮ್ಮಂತೆ ನನಗೆ ಸನ್ಯಾಸವನ್ನು ಕೊಡುವುದಿಲ್ಲವೆಂದು ಹೇಳುತ್ತಾರೆ. ಆದುದರಿಂದ ನಾನಿಲ್ಲಿದ್ದು ಲಾಭವೇನು? ನೀವೆಲ್ಲರೂ ನನಗಾಜ್ಞೆ ಕೊಟ್ಟರೆ ಸ್ವಗ್ರಾಮಕ್ಕೆ ಹೋಗುತ್ತೇನೆ’ ಎಂದು ಹೇಳಿ ಧಾರಾನಗರವನ್ನು ಸೇರಿ ನಡೆದ ವೃತ್ತಾಂತವನ್ನೆಲ್ಲ ಭೋಜರಾಜನಿಗೆ ಹೇಳಿದನು. ಮಹಾರಾಜನು ಕೇಳಿ ವಿಶೇಷವಾಗಿ ನಕ್ಕು ಕಾಳಿದಾಸನನ್ನು ಗೌರವಿಸಿದನು.

ಭೋಜನ ಸಭೆಯಲ್ಲಿದ್ದ ಹೊಸಪಂಡಿತನಿಗೆ ಮತ್ತೆ ಕಾಳಿದಾಸನು ಬಂದನೆಂದು ತಿಳಿದು ಎದೆಯೊಡೆದು ಹೋಯಿತು. ಸನ್ಯಾಸಿಗಳಾದ ಪಂಡಿತರ

ಮಕ್ಕಳು ತಮ್ಮ ತಮ್ಮ ತಂದೆಗಳು ಸನ್ಯಾಸಿಗಳಾದ ಸಮಾಚಾರವನ್ನು ಕೇಳಿ ಕಾಳಿದಾಸನಿಂದ ಸಮಾಚಾರದ ನಿಜತ್ವವನ್ನು ತಿಳಿಯಬೇಕೆಂದು ಬಂದರು. ಕಾಳಿದಾಸನು ಅವರಿಗೆ ಸ್ವಾಗತವಿತ್ತು—"ಅಯ್ಯಾ, ನಿಮ್ಮ ತಂದೆಗಳು ನನಗೆ ಸನ್ಯಾಸವನ್ನು ಕೊಡಿಸಬೇಕೆಂದು ಬಗೆದು, ನನ್ನನ್ನು ತಮ್ಮ ಸಂಗಡ ಕಾಶಿಗೆ ಕರೆದುಕೊಂಡು ಹೋದರಲ್ಲವೇ? ಆದರೆ ನನಗೆ ಸನ್ಯಾಸವು ಲಭಿಸಲಿಲ್ಲ. ಪೂರ್ವ ಪುಣ್ಯವಶದಿಂದ ಅವರು ಮಾತ್ರ ಸನ್ಯಾಸವನ್ನು ತೆಗೆದುಕೊಂಡು ಕಲ್ಯಾಣವನ್ನು ಹೊಂದಿದರು. ಮತ್ತೆ ಸಂಸಾರಸಾಗರದಲ್ಲಿ ಬಿದ್ದು ಒದೆದಾಡಲು ನಾನಿಲ್ಲಿಗೆ ಬಂದೆನು" ಎಂದು ಹೇಳಿ, ಪಂಡಿತಪುತ್ರರನ್ನು ಸಮಾಧಾನಪಡಿಸಿ ಕಳುಹಿಸಿದನು ಆ ಬಳಿಕ ಯಥಾರೀತಿಯಾಗಿ ಎಲ್ಲರೂ ಅವರವರ ಕಾರ್ಯದಲ್ಲಿ ಪ್ರವರ್ತಿಸುತ್ತಿದ್ದರು.



## ಜಾನುದಘ್ನ ಕವಿ.

ಒಂದು ದಿನ ಭೋಜರಾಜನು ಬೇಟೆಯಾಡುವುದಕ್ಕಾಗಿ ಬಿಳಿಯ ಕುದುರೆಯನ್ನು ಹತ್ತಿ ಅರಣ್ಯಮಾರ್ಗವನ್ನು ಹಿಡಿದು ಹೋಗುತ್ತಿದ್ದನು. ಮಾರ್ಗಮಧ್ಯದಲ್ಲಿ ಕಟ್ಟಿಗೆಹೊರೆಯನ್ನು ತಲೆಯಮೇಲಿಟ್ಟುಕೊಂಡು ನದಿಯನ್ನು ದಾಟುತ್ತಿರುವ ಓರ್ವ ಬ್ರಾಹ್ಮಣನನ್ನು ನೋಡಿ ಸಮೀಪಕ್ಕೆಹೋಗಿ-

"ಕಿಯನ್ಮಾನಂ ಜಲಂ ವಿಪ್ರ?"

"ಅಯ್ಯಾ ಬ್ರಾಹ್ಮಣನೇ ನೀರಿನ ಆಳವೆಷ್ಟು?"

ಎಂದು ಕೇಳಿದನು. ಆಗಲಾ ಬ್ರಾಹ್ಮಣನು--

"ಜಾನುದಘ್ನಂ ನರಾಧಿಪ"

"ರಾಜೇಂದ್ರಾ ಮೊಳಕಾಲುದ್ದವಿರುವುದು"

ಎಂದು ಪ್ರತ್ಯುತ್ತರ ಹೇಳಲು ಭೋಜನು ಆಶ್ಚರ್ಯಪಟ್ಟು—

"ಈದೃಶೀ ಕಿಮವಸ್ಥಾ ತೇ?"

"ನಿನಗೀ ಅವಸ್ಥೆಯೇನು?"

ಎಂದು ಕೇಳಿದನು. ಅದಕ್ಕೆ ಬ್ರಾಹ್ಮಣನು ಈ ರೀತಿಯಾಗಿ ಪ್ರತಿ ಹೇಳಿದನು—

"ನಹಿ ಸರ್ವೇಭವಾದೃಶಾಃ"

"ಎಲ್ಲರೂ ನಿನ್ನಂಥವರಲ್ಲವಷ್ಟೆ?"

ಭೋಜನು ಪ್ರಸನ್ನನಾಗಿ "ಅಯ್ಯಾ ವಿದ್ಯಾಂಸನೇ, ನನ್ನ ಬೊಕ್ಕಸಾಧಿಕಾರಿಯ ಬಳಿಗೆ ಹೋಗಿ ನಾನು ಆಜ್ಞಾಪಿಸಿದೆನೆಂದು ಹೇಳಿ ಒಂದು ಲಕ್ಷ ರೂಪಾಯಿಗಳನ್ನು ತೆಗೆದುಕೋ" ಎಂದು ಹೇಳಿದನು.

ಆ ಬ್ರಾಹ್ಮಣನು ಅತಿಯಾಗಿ ಸಂತೋಷಿಸಿ ಕೋಶಾಧ್ಯಕ್ಷನ ಬಳಿಗೆ ಹೋಗಿ "ಅಯ್ಯಾ, ಭೋಜಮಹಾರಾಜನು ನಿನ್ನನ್ನು ಕೇಳಿ ಒಂದು ಲಕ್ಷ ರೂಪಾಯಿಗಳನ್ನು ತೆಗೆದುಕೊಳ್ಳುವಂತೆ ಆಜ್ಞಾಪಿಸಿರುವನು. ಆ ಧನವನ್ನು ಕೊಟ್ಟರೆ ನಾನು ಹೊರಡುತ್ತೇನೆ" ಎಂದು ಕೇಳಿದನು. ಕೋಶಾಧಿಕಾರಿಯು "ಆ ಬ್ರಾಹ್ಮಣನ ವೇಷವನ್ನು ನೋಡಿ ಫಕ್ಕನೆ ನಕ್ಕು 'ಬ್ರಾಹ್ಮಣಾ, ನೀನು ಲಕ್ಷರೂಪಾಯಿಗಳಿಗೆ ತಕ್ಕವನೇ! ಹೋಗು ಹೋಗು" ಎಂದು ಒಂದು ಬಿಡಿ ಕಾಸನ್ನು ಸಹ ಕೊಡದೆ ಹಿಂದಕ್ಕೆ ಕಳುಹಿಸಿದನು.

ಬ್ರಾಹ್ಮಣನು ಬಹಳ ಖಿನ್ನನಾಗಿ ಮತ್ತೆ ಮಹಾರಾಜನ ಸನ್ನಿಧಿಗೆ ಬಂದು "ರಾಜೇಂದ್ರಾ, ನಿಮ್ಮ ಧನಾಧಿಕಾರಿಯು ಲಕ್ಷರೂಪಾಯಿಗಳಿಗೆ ನೀನು ಯೋಗ್ಯನೇ ಎಂದು ಹಣ ಕೊಡದೆಯೇ ಹೊರಹೊರಡಿಸಿದನು" ಎಂಬುದಾಗಿ ಮೊರೆಯಿಟ್ಟುಕೊಂಡನು. ಭೋಜನು ಕೇಳಿ ವಿಷಾದಿಸಿ "ವಿಪ್ರೋತ್ತಮಾ, ಈ ಸಲ ಎರಡುಲಕ್ಷ ರೂಪಾಯಿಗಳನ್ನು ಕೇಳು, ತಪ್ಪದೆ ಕೊಡುವನು" ಎಂದು ಹೇಳಿಕಳುಹಿಸಿದನು.

ಮತ್ತೆ ಬ್ರಾಹ್ಮಣನು ಬೊಕ್ಕಸದ ಅಧಿಕಾರಿಯ ಬಳಿಗೆ ಹೋಗಿ ಕೇಳಲು "ಹಾರುವಾ, ನೀನು ಎರಡು ಲಕ್ಷಕ್ಕೆ ತಕ್ಕವನೇ? ಹೋಗಯ್ಯಾ" ಎಂದು ಮತ್ತೆ ಹಿಂದಕ್ಕೆ ಕಳುಹಿಸಿದನು. ಬ್ರಾಹ್ಮಣನು ಕೋಪಶಾಪಗಳಿಗಧೀನನಾದರೂ ಒಳಗೊಳಗೆ ಅಡಗಿಸಿಕೊಂಡು 'ಬಡವನ ಕೋಪ ದವಡೆಗೆ ಮೂಲ' ಎಂಬ ನಾಣ್ಣುಡಿಯನ್ನು ಸ್ಮರಿಸಿ, ಭೋಜನ ಬಳಿಗೆ ಬಂದು "ರಾಜೇಂದ್ರಾ

ನಿನ್ನ ಬೊಕ್ಕಸದವನು ಅತಿ ದುರಹಂಕಾರಿಯಾಗಿರುವನು. ಅಧಿಕಾರಿಗಳು ವೇಷ ಭಾಷೆಗಳಿಗಧೀನರಾಗಿ ಅದೊಂದು ವಿಜಾತೀಯವಾದಸಂಗಡವಾಗಿ ಏರ್ಪ ಟ್ಟಿ ಪದವೀಧರರನ್ನೂ, ದೊಡ್ಡ ಮನೆತನದವರನ್ನೂ ಗೌರವಿಸುವರೇಹೊರತು ಬಾಹ್ಯಾಡಂಬರವಿಲ್ಲದೆ ದರಿದ್ರರಾಗಿ ವಿದ್ಯಾವಿನಯಸಂಪನ್ನರಾಗಿದ್ದರೂ ಅಂಥ ವರನ್ನು ಹುಲ್ಲಿಗಿಂತಲೂ ಹಗುರವಾಗಿ ಭಾವಿಸಿ ಅವರ ಸಂಗಡ ಸಮ್ಮಿಶ್ರವಾಗಿ ಮಾತನಾಡುವುದೇ ತಮಗೆ ದೊಡ್ಡ ಅಗೌರವವೆಂದು ಭಾವಿಸಿರುವರು ರಾಜಾ ಜ್ಞೆಯನ್ನೇ ಅಲ್ಲಗಳೆಯುವಾಗ ಉಳಿದ ವಿಚಾರವನ್ನು ಹೇಳುವುದೇನು ? ಈಗಲೂ ಕೂಡ ನಗುತ್ತ ' ನೀನು ಎರಡು ಲಕ್ಷಕ್ಕೆ ಯೋಗ್ಯನಲ್ಲ, ಹೋಗೆಂದು ಹೇಳಿದನು. ಇದ್ದ ಸಂಗತಿ ಅರಿಕೆ ಮಾಡಿದ್ದೇನೆ, ಇದರಮೇಲೆ ಪ್ರಭುಚಿತ್ತ" ಎಂದನು.

ಭೋಜನು ಕೇಳಿ ಹುಸಿನಗು ನಕ್ಕು " ಬ್ರಾಹ್ಮಣೋತ್ತಮಾ, ಶ್ರಮ ವೆಂದು ಎಣಿಸದೆ ಈಸಲ ಹೋಗಿ " ಮೂರುಲಕ್ಷ ರೂಪಾಯಿಗಳನ್ನು ಭೋಜ ರಾಜನು ಕೊಡುವಂತೆ ಹೇಳಿರುವನು ಎಂದು ಕೇಳಿ ಆ ದ್ರವ್ಯವನ್ನು ತೆಗೆದು ಕೋ" ಎಂಬುದಾಗಿ ಸಮಾಧಾನಪಡಿಸಿ, ಮತ್ತೆ ಬ್ರಾಹ್ಮಣನನ್ನು ಕೋಶಾ ಧ್ಯಕ್ಷನ ಬಳಿಗೆ ಕಳುಹಿಸಿದನು. ಆತನು ಹೋಗಿ ಬೊಕ್ಕಸದವನನ್ನು ಕೇಳಲು ನಗುತ್ತ ಏನೂ ಬದಲು ಹೇಳದಂತೆ ಸುಮ್ಮನಿದ್ದನು. ಬ್ರಾಹ್ಮಣನು ರೇಗಿ ಬಿದ್ದು ಸರಸರನೆ ಭೋಜನ ಬಳಿಯನ್ನು ಸೇರಿ ಶರೀರವೆಲ್ಲವೂ ಸಂತಾಪವಿಷಾ ದಗಳಿಂದ ಚಲಿಸುತ್ತಿರಲು ತುಟಿಗಳನ್ನು ಅಲುಗಿಸುತ್ತ ಹೀಗೆ ಹೇಳಿದನು—

ಶ್ಲೋ|| " ರಾಜನ್ ಕನಕಧಾರಾಭಿಃ ತ್ವಯಿಸರ್ವತ್ರ ವರ್ಷತಿ
ಅಭಾಗ್ಯಚ್ಛತ್ರಸಂಛನ್ನೇಮಯಿನಾಯಾಂತಿ ಬಿಂದವಃ "

ಕಂ|| ಸುರಿಸುತಿರೆ ಕನಕವೃಷ್ಟಿಯ |
ನರವರ ನೀಂ, ಹೀನಭಾಗ್ಯವೆಂಬಾ ಕೊಡೆಯಂ ||
ಧರಿಸಿದ ಕತದಿಂದೊಂದಾ |
ದರು ಹನಿ ತಾಂ ಬೀಳಲಿಲ್ಲವೆನ್ನೊಳಗಕಟಾ ||

" ರಾಜೇಂದ್ರಾ, ನೀನು ದೇಶದೆಲ್ಲೆಲ್ಲಾ ಸುವರ್ಣವೃಷ್ಟಿಯನ್ನು ಸುರಿಸುತ್ತಿದ್ದರೂ ದೌರ್ಭಾ

ಗ್ಯವೆಂಬ ಕೊಡೆಯನ್ನು ಪಿಡಿದಿರುವ ನನ್ನ ಮೇಲೆ ಮಾತ್ರ ಒಂದು ಹನಿಯಾದರೂ ಬೀಳ ಲಿಲ್ಲ'' ಇಷ್ಟೇ ಅಲ್ಲದೆ

ಶ್ಲೋ॥ '' ತ್ವಯಿವರ್ಷತಿ ಪರ್ಜನ್ಯೇ ಸರ್ವೇಪಲ್ಲವಿತಾ ದ್ರುಮಾಃ
ಅಸ್ಮಾಕಮರ್ಕವೃಕ್ಷಾಣಾಂ ಪೂರ್ವಪತ್ರೇಷು ಸಂಶಯಃ ''

''ಪ್ರಭುವೇ, ನೀನೆಂಬ ಮೇಘದಿಂದ ಬಂಗಾರದ ಮಳೆ ಸುರಿದು ಯಾಚಕರೆಂಬ ವೃಕ್ಷಗಳೆಲ್ಲವೂ ಚೆನ್ನಾಗಿ ಚಿಗುರಿರುವವು. ಆದರೂ ನಾನೆಂಬ ಎಕ್ಕೆಯ ಗಿಡಕ್ಕೆ ಮುಂಚೆಯಿದ್ದ ಎಲೆಗಳಿಗೆ (ಕಟ್ಟಿಗೆಹೊರೆಗೆ) ಕೂಡ ಮೋಸವುಂಟಾದೀತೇನೋ ಎಂದು ಭಯವಾಗುತ್ತಿರುವುದು.

ಎಂದು ಹೇಳಿದ ಬ್ರಾಹ್ಮಣನ ದೈನ್ಯೋಕ್ತಿಯನ್ನು ಭೋಜನು ಕೇಳಿ '' ಅಯ್ಯೋ ಪಾಪ, ಈ ಬ್ರಾಹ್ಮಣನು ಬಹಳ ವ್ಯಥೆಪಟ್ಟಿರುವನು '' ಎಂದು ಆಲೋಚಿಸಿ ಒಬ್ಬ ಸೇವಕನನ್ನು ಬರಮಾಡಿ ಆ ಬ್ರಾಹ್ಮಣನಸಂಗಡ ಹೋಗುವಂತೆ ನಿಯಮಿಸಿ '' ಅಯ್ಯಾ ಬ್ರಾಹ್ಮಣಾ, ನೀನು ಸಂತಾಪಪಡಬೇಡ, ಈ ಭಟನೊಡಗೂಡಿ ಈಸಲ ಕೋಶಾಧ್ಯಕ್ಷನಲ್ಲಿಗೆ ಹೋಗಿ ನೂರುಲಕ್ಷ ರೂಪಾಯಿಗಳನ್ನೂ, ಹತ್ತುಆನೆಗಳನ್ನೂ ತೆಗದುಕೋ ' ಎಂದು ಗೌರವಿಸಿ ಕಳುಹಿಸಿದನು ಆಗ ಕೋಶಾಧಿಕಾರಿಯು ಧನವನ್ನು ಕೊಟ್ಟು ಕಳುಹಿಸಿದನು



## ಭಾಸ್ಕರನೂ, ಶಾಕಲ್ಯನೂ.

ಒಂದು ದಿನ ಭೋಜರಾಜನು ಧಾರಾನಗರದಲ್ಲಿ ಸಂಚಾರಮಾಡುತ್ತ ಒಂದು ಶಿವಾಲಯದಲ್ಲಿ ಮಲಗಿದ್ದ ಇಬ್ಬರು ಬ್ರಾಹ್ಮಣರನ್ನು ಕಂಡನು. ಅವರಲ್ಲೊರ್ವನು ನಿದ್ರೆಯಿಂದಎಚ್ಚತ್ತು ಮಲಗಿ ನಿದ್ರಿಸುತ್ತಿದ್ದ ಮತ್ತೊಬ್ಬನನ್ನು ತನ್ನ ಕೈಯಿಂದ ತಟ್ಟುತ್ತ '' ಅಯ್ಯಾ, ನೀನಾರು? ನಿದ್ರಿಸುತ್ತಿರುವೆಯಾ, ಎಚ್ಚರವಾಗಿರುವೆಯಾ? ಎಂದು ಕೇಳಿದನು.

ಎರಡನೆಯವನು—ನಿದ್ರೆಯಿಂದೆದ್ದು ಕಣ್ಣುಗಳನ್ನು ಸವರಿಕೊಳ್ಳುತ್ತಾ ದೃಷ್ಟಿಯನ್ನು ಪಸರಿಸಿ ಸಂಭ್ರಮದಿಂದ—ಸ್ವಾಮಿ, ಪರಸ್ಥಳದಲ್ಲಿ ನಿದ್ರೆಯಿಲ್ಲಿ ಬಂತು? ಏನೇನೋ ಆಲೋಚನೆ ಬೇರೆ, ಸುಮ್ಮನೆ ಕಣ್ಣುಮುಚ್ಚಿಕೊಂಡು ಮಲಗಿದ್ದೆನಷ್ಟೇ.

ಮೊದಲನೆಯವನು–ನೀನು ಹೇಳಿದುದು ನಿಜ. ನನಗೂ ನಿದ್ರೆ ಬರದೆ ನಿನ್ನನ್ನು ಎಬ್ಬಿಸಿದೆನು. ಒಳ್ಳೆಯದು, ನಿನ್ನ ಹೆಸರೇನು? ನಿನ್ನ ಊರಾವುದು? ನಿನಗಿಲ್ಲಿ ಏನು ಕೆಲಸವಿರುವುದು?

ಎರಡನೆಯವನು ಬ್ರಾಹ್ಮಣ-ಅಯ್ಯಾ, ನನ್ನ ಹೆಸರು ಭಾಸ್ಕರನು. ಪಶ್ಚಿಮಸಮುದ್ರತೀರದಲ್ಲಿ ಪ್ರಭಾಸತೀರ್ಥ ಸಮೀಪದಲ್ಲಿ ನನ್ನ ನಿವಾಸವು. ಅಲ್ಲಿನವರನೇಕರು ಭೋಜರಾಜನು ಬಹಳ ಉದಾರಿಯೆಂದು ವಿಶೇಷವಾಗಿ ವರ್ಣಿಸಿದರು. ಅದನ್ನು ಕೇಳಿ ಆ ಮಹಾರಾಜನನ್ನು ಯಾಚಿಸಿ ನನ್ನ ದಾರಿದ್ರ್ಯವಿಚ್ಛಿತ್ತಿ ಮಾಡಿಕೊಳ್ಳಬೇಕೆಂದು ಇಲ್ಲಿಗೆ ಬಂದಿರುವೆನು ನೀನು ದೊಡ್ಡವನಾದುದರಿಂದ ನಮ್ಮ ತಂದೆಯನ್ನು ನೋಡಿದಹಾಗಾಗುತ್ತದೆ ನಿನ್ನ ವೃತ್ತಾಂತವನ್ನು ದಯವಿಟ್ಟು ತಿಳಿಸಬೇಕಾಗಿ ಪ್ರಾರ್ಥಿಸುತ್ತೇನೆ"

ಮೊದಲನೆಯವನು–"ಅಪ್ಪಾ, ನನ್ನ ಹೆಸರು ಶಾಕಲ್ಯನು. ನಾನೂ ಸಹ ಏಕಶಿಲಾನಗರದಿಂದ ಭೋಜರಾಜನ ಸಂದರ್ಶನಕ್ಕೇಬಂದಿರುತ್ತೇನೆ. ಬಾಬೂ! ನಿನ್ನನ್ನು ನೋಡಿದಾಗಿನಿಂದಲೂ ನಿನ್ನ ಮುಖಚಿಹ್ನೆಯಿಂದ ಏನೋ ದುಃಖವು ಹೊರಸೂಸುತ್ತಿರುವುದು. ನಿಜವನ್ನು ಮಾಜದೆ ಹೇಳು" ಎಂದು ಕೇಳಲು ಆತನು ಹೀಗೆ ಹೇಳುತ್ತಾನೆ—

ಶ್ಲೋ|| "ಕ್ಷುತ್ಕ್ಷಾಮಾಃ ಶಿಶವಃ ಶವಾಇವಭೃಶಂ ಮಂದಾಶಯಾ ಬಾಂಧವಾಃ |
ಲಿಪ್ತಾಜರ್ಜರಘರ್ಘರೀಜತುಲವೈರ್ನೋಮಾಂತಥಾ ಬಾಧತೇ ||
ಗೇಹಿನ್ಯಾತ್ರುಟಿತಾಂಶುಕಂ ಘಟಯಿತುಂ ಕೃತ್ವಾಸಕಾಕುಸ್ಮಿತಂ |
ಕುಪ್ಯಂತೀಪ್ರತಿವೇಶ್ಮಲೋಕಗೃಹಿಣೀಸೂಚೀಂ ಯಥಾಯಾಚಿತಾ"

ಸೀ|| ಜೀವಶವಗಳಾಗಿ ಹಸಿವಿನಿಂ ಮಕ್ಕಳು
ಕೃಶರಾಗಿ ಬಿದ್ದಿಹರೊಂದುಕಡೆಗೆ
ಸಾವಧಾನದೊಳಗಾ ಬಂಧುಗಳ್ನೋಡುತೆ
ತೊಲಗುತಲಿರುವರದೊಂದುಕಡೆಗೆ
ಭಾವಿಯ ನೀರನು ತರುತಿಹ ಕುಂಭದ
ತೂತಿಗೆ ಅರಗು ಮೆತ್ತಿರುವೆ ಕೊನೆಗೆ

ಈ ವಿಧವಾದರು ಬಾಧಿಸದೆನ್ನನು
ನೋಯುವುದೆನಗೆ ಮತ್ತೊಂದು ಬಗೆಗೆ

ಗೀ|| ಹಾ! ವಿಧಿಯೆ, ಸತಿಯುಟ್ಟಿಹ ಸೀರೆ ಹರಿದು
ಯಾವುದಿಲ್ಲದೆ ಹೊಲಿಗೆಯ ಹಾಕಿಕೊಳಲು
ಭಾವಕಿಯ ನೆರೆಗೃಹಿಣಿಯ ಸೂಜಿ ಕೇಳ
ಲಾವಧೂಮಣಿ ಗದರಿದಳಕಟ ನೊಂದೆ

"ಅಯ್ಯಾ, ನನ್ನ ಕಷ್ಟವನ್ನೇನೆಂದು ಹೇಳಲಿ? ಮಕ್ಕಳು ಹಸಿವಿನಿಂದ ಕೃಶರಾಗಿ ಹೆಣಗಳಂತೆ ಬಿದ್ದಿರುವರು ಬಂಧುಗಳಾದರಿಸದೆ ಉದಾಸೀನರಾಗಿರುವರು ನೀರುತರಲು ಮಣ್ಣಿನ ಗಡಿಗೆಯನ್ನು ಕೊಂಡುಕೊಳ್ಳುವುದಕ್ಕೂ, ಗತಿಯಿಲ್ಲದೆ ತೂತು ಬಿದ್ದ ಹಳೆ ಕುಂಭಕ್ಕೆ ಅರಗನ್ನು ಕರಗಿಸಿ ರಂಧ್ರಕ್ಕಿಟ್ಟು ಬಳಸಿಕೊಳ್ಳುತ್ತಿರುವೆನು. ಇದೆಲ್ಲವೂ ಅಷ್ಟಾಗಿ ನನ್ನನ್ನು ಬಾಧಿಸುವುದಿಲ್ಲ ಆದರೆ ಸ್ವಾಮಿ, ನನ್ನ ಹೆಂಡತಿಯು ಹರಿದುಹೋಗಿದ್ದ ಸೀರೆಯನ್ನು ಒಲಿದು ಸರಿಮಾಡಿಕೊಂಡು ಉಟ್ಟುಕೊಳ್ಳುವುದಕ್ಕಾಗಿ ನೆರೆಯ ಗೃಹಸ್ಥನ ಹೆಂಡತಿಯನ್ನು ಸಾಭಿಪ್ರಾಯಯುತವಾದ ಹುಸಿನಗುವಿನಿಂದ ಸೂಜಿಯನ್ನು ಕೇಳಿದಾಗ ಆ ಗೃಹಿಣಿಯು ಗದರಿದುದನ್ನು ನೋಡಿ ನನ್ನ ಹೃದಯವು ಈಗಲೂ ಮರುಗುವುದು."

ಎಂದು ಹೇಳಿದ ಹೃದಯದ್ರಾವಕವಾದ ಈ ಮಾತುಗಳನ್ನು ಭೋಜರಾಜನು ಕೇಳಿ ವಿಷಾದಿಸಿ ಆ ಪಂಡಿತನಿಗೆ ತನ್ನ ಆಭರಣಗಳನ್ನೆಲ್ಲ ಕೊಟ್ಟು ಅಯ್ಯಾ, ಭಾಸ್ಕರಕವಿಯೇ ನಿನ್ನ ಮಕ್ಕಳು ಬಹಳ ಕಷ್ಟಪಡುತ್ತಾರಾದುದರಿಂದ ತ್ವರೆಯಾಗಿ ನಿನ್ನ ದೇಶಕ್ಕೆ ಹೋಗು ಎಂದು ಹೇಳಿ ಕಳುಹಿಸಿದನು.

ಆ ತರುವಾಯ ಶಾಕಲ್ಯನು ರಾಜನನ್ನು ನೋಡಿ ಈ ರೀತಿ ಹೇಳಿದನು-

ಶ್ಲೋ|| "ಅಭ್ಯುದ್ಧೃತಾ ವಸುಮತೀ ದಳಿತೋರಿವರ್ಗಃ
ಕ್ರೋಡೀಕೃತಾ ಬಲವತಾಬಲಿ ರಾಜಲಕ್ಷ್ಮೀಃ
ಏಕತ್ರಜನ್ಮನಿಕೃತಂ ಯದನೇನಯೂನಾ
ಜನ್ಮತ್ರಯೇತದಕರೋತ್ಪುರುಷಃಪುರಾಣಃ"

ಸೀ|| ನಾರಾಯಣನು ವರಾಹಾವತಾರವ ಮಾಡಿ
ಧಾರಿಣಿಯನ್ನು ತಾನುದ್ಧರಿಸಿದ

ಪರಶುರಾಮನು ಸಲೆ ಶತ್ರುಗಳಂ ಕೊಂದು
ನೆರೆಪರಾಕ್ರಮಿಯೆಂದು ಖ್ಯಾತಿಪಡೆದ
ಸಾರಿ ವಾಮನನಾಗಿ ಬಲಿರಾಜ್ಯಲಕ್ಷ್ಮಿಯ
ಸೂರೆಗೊಂಡನು ನೀರಜಾಕ್ಷ ತಾನು
ಮೂರು ಜನ್ಮಗಳೊಳು ಮೂರುಕಾರ್ಯಂಗಳ
ಬಾರಿಬಾರಿಗು ಮಾಡಿ ತೋರಿಸಿದನು

ಗೀ|| ಧೀರಭೋಜನೆ ಒಂದೆ ಜನ್ಮದೊಳು ನೀನು
ಮೂರುಕಾರ್ಯಗಳನ್ನುರೆ ಲೀಲೆಯಿಂದೆ
ಮೀರಿದತಿಶಯ ಬಾಲ್ಯದಿ ಮಾಡಿ ಜಗಕ
ಪಾರಮಹಿಮೆಯ ತೋರಿದೆ ಸಖನುಮಾಗಿ

"ಶ್ರೀಮನ್ನಾರಾಯಣನು ವರಾಹ, ಪರಶುರಾಮ, ವಾಮನಾವತಾರಗಳನ್ನು ಮೂರುಜನ್ಮಗಳಲ್ಲಿ ತಾಳಿ ಅದರಲ್ಲಿ ವರಾಹಮೂರ್ತಿಯಾಗಿ ಭೂಮಿಯನ್ನುದ್ಧರಿಸಿದನು. (ಪ್ರಳಯ ಸಮುದ್ರದಿಂದ ಎತ್ತಿದನು) ಪರಶುರಾಮನಾಗಿ ಶತ್ರುಗಳನ್ನು ಸಂಹರಿಸಿದನು. ವಾಮನನಾಗಿ ಬಲಿರಾಜ್ಯಲಕ್ಷ್ಮಿಯನ್ನು ಅಪಹರಿಸಿದನು ಹೀಗೆ ಭಗವಂತನು ಮೂರು ಜನ್ಮಗಳಲ್ಲಿ ಮೂರು ಕಾರ್ಯಗಳನ್ನು ಮಾಡಿದನು ಭೋಜರಾಜೇಂದ್ರನೇ, ನೀನಾದರೋ ಈ ಮೂರು ಘನಕಾರ್ಯಗಳನ್ನು ಒಂದೇ ಜನ್ಮದಲ್ಲಿಯೇ ಅದರಲ್ಲೂ ಪ್ರಾಯದಲ್ಲಿಯೇ ಲೀಲೆಯಿಂದ ಸಾಧಿಸಿರುವೆ"

ಈ ರೀತಿ ಹೇಳಿದ ಶ್ಲೋಕಾಭಿಪ್ರಾಯವನ್ನು ಮಹಾರಾಜನು ಕೇಳಿ ಆಶ್ಚರ್ಯಪಟ್ಟು ಮೂರುಲಕ್ಷ ದ್ರವ್ಯವನ್ನು ಕೊಟ್ಟು ಕಳುಹಿಸಿದನು.



## ಮಾಯೆಗಾತಿ.

ಭೋಜರಾಜನು ಒಂದುದಿನ ವೇಷಾಂತರದಿಂದ ಧಾರಾನಗರದಲ್ಲಿ ಸಂಚಾರಮಾಡುತ್ತ ಒಂದಾನೊಂದು ಗೃಹವನ್ನು ಪ್ರವೇಶಿಸಿದನು. ಆ ಗೃಹದಲ್ಲಿರುವ ಗೃಹಿಣಿಯು ಹಗಲು ಕಾಗೆಯ ಕೂಗನ್ನು ಕೇಳಿ, ಭಯವನ್ನು ನಟಿ

ಸುತ್ತ ವೃದ್ಧನಾದ ತನ್ನ ಗಂಡನನ್ನು ಧಟ್ಟನೆ ಬಿಗಿದಪ್ಪಿಕೊಂಡಳು. ಮಹಾರಾಜನು ಇದನ್ನು ನೋಡಿ 'ಆಹಾ! ಕಾಗೆಯ ಕೂಗಿಗೆ ಭಯವನ್ನು ತೋರ್ಪಡಿಸುವ ಈ ಯುವತಿಯು ತನ್ನ ಗಂಡನನ್ನು ಮೋಸಗೊಳಿಸುವವಳಾಗಿರಬೇಕೆಂದೂ, ಇವಳು ಪ್ರಾಯಶಃ ರಾತ್ರಿವೇಳೆಯಲ್ಲಿ ದೊಡ್ಡ ಸಾಹಸಕಾರ್ಯವನ್ನು ಮಾಡುವಳೆಂದೂ ನಿಶ್ಚಯಿಸಿ. ಇದನ್ನು ಕಂಡುಹಿಡಿಯಲೇಬೇಕೆಂದು ದೃಢಸಂಕಲ್ಪಮಾಡಿಕೊಂಡು, ಸಾಯಂಕಾಲದವರೆಗೂ ಅಲ್ಲಿ ಇಲ್ಲಿ ಸಂಚರಿಸುತ್ತಿದ್ದು ಅಸ್ತಮಯವಾಗುತ್ತಲೇ ರಹಸ್ಯವಾದ ಸ್ಥಳದಲ್ಲಿದ್ದು ನಿರೀಕ್ಷಿಸುತ್ತಿದ್ದನು.

ಆ ಸುಂದರಿಯು ಗೃಹಕೃತ್ಯಗಳನ್ನೆಲ್ಲ ತೀರಿಸಿಕೊಂಡು ಗಂಡನನ್ನು ನಿದ್ರೆಗೊಳಿಸಿ ಆತನಿಗೆ ತಿಳಿಯದಂತೆ ಮೆಲ್ಲನೆ ಗೃಹಕ್ಕೆ ಕವಾಟಬಂಧನಮಾಡಿ ಮನೆಯಿಂದ ಹೊರಹೊರಟಳು.

ಭೋಜರಾಜೇಂದ್ರನು ಇದನ್ನು ನೋಡಿ ಅವಳಿಗೆ ತಿಳಿಯದ ಹಾಗೆ ಮೆಲ್ಲನೆ ನಂಗಡ ಹೋಗುತ್ತಿರಲು, ಆ ಯುವತಿಯು ನರ್ಮದಾ ನದೀತೀರವನ್ನು ಸೇರಿದಳು. ಆ ನದಿಯಲ್ಲಿ ಬಹು ಭಯಂಕರವಾದ ಮೊಸಳೆಗಳು ತುಂಬಿದ್ದವು ಅವು ತನ್ನ ಹತ್ತಿರಕ್ಕೆ ಬರದಂತೆ ಕೆಲವು ಮಾಂಸಖಂಡಗಳನ್ನು ಅವುಗಳಮುಂದೆ ಹಾಕಿ, ಉಪಾಯವಾಗಿ ಆ ಕಡೆಯ ದಡವನ್ನು ಸೇರಿ ಅಲ್ಲಿ ಕಾದಿದ್ದ ಅಗಸನಲ್ಲಿ ಸಂಪರ್ಕಮಾಡಿ ತನ್ನ ಇಷ್ಟಾರ್ಥವನ್ನು ನೆರವೇರಿಸಿಕೊಂಡು ಪೂರ್ವರೀತಿಯಾಗಿ ನದೀ ಗ್ರಾಹಗಳಿಗೆ ಮಾಂಸಖಂಡಗಳನ್ನು ಹಾಕಿ ನದಿಯನ್ನು ದಾಟಿ ಗೃಹವನ್ನು ಸೇರಿದಳು.

ಇದೆಲ್ಲವನ್ನೂ ಭೋಜರಾಜನು ನೋಡಿ ಅತ್ಯಾಶ್ಚರ್ಯಗೊಂಡು ಅರಮನೆಯ ಅಂತಃಪುರವನ್ನು ಸೇರಿ ನಿದ್ರಿಸಿ ಮರುದಿನ ಪ್ರಾತಃಕಾಲ ಎದ್ದು ನಿತ್ಯಕರ್ಮಗಳನ್ನು ತೀರಿಸಿಕೊಂಡು ಸಭೆಗೆ ಬಂದು ಸಕಲ ಪರಿವಾರದಿಂದಲೂ ಕಾಳಿದಾಸ, ಭವಭೂತಿ, ಬಾಣಾದಿ ಸುಕವಿಬೃಂದದಿಂದಲೂ ಪರಿವೃತನಾಗಿ ಒಡ್ಡೋಲಗದಲ್ಲಿ ಕುಳಿತು ಕಾಳಿದಾಸನನ್ನು ಸಂಬೋಧಿಸಿ ಹೀಗೆ ಹೇಳಿದನು—

"ದಿವಾ ಕಾಕರುತಾದ್ಭೀತಾ"

"ಹಗಲು ಹೊತ್ತಿನಲ್ಲಿಯೇ ಕಾಗೆಯ ಕೂಗಿಗೆ ಬೆದರುವಳು"

ಕಾಳಿದಾಸನು ಈ ಸಮಸ್ಯೆಯನ್ನು ಕೇಳಿ ಕಾಳೀವರಪ್ರಸಾದಿಯಾದುದರಿಂದ ಸಮಸ್ತ ವಿಷಯವನ್ನೂ ಗ್ರಹಿಸಿ, ಈ ರೀತಿ ಪ್ರತ್ಯುತ್ತರ ಕೊಟ್ಟನು—

"ರಾತ್ರೌ ತರತಿ ನರ್ಮದಾಂ"

"ರಾತ್ರಿಯವೇಳೆ ನರ್ಮದಾನದಿಯನ್ನು ದಾಟುವಳು"

ಆ ಸಮಾಧಾನಕರವಾದ ಉತ್ತರವನ್ನು ಕೇಳಿ ರಾಜನು ಆಶ್ಚರ್ಯಮಗ್ನನಾಗಿ ಮತ್ತೆ ಹೀಗೆ ಹೇಳಿದನು—

"ತತ್ರಸಂತಿ ಜಲೇಗ್ರಾಹಾಃ"

"ಆ ನರ್ಮದಾತೀರದಲ್ಲಿ ಮೊಸಳೆಗಳಿರುವವಲ್ಲಾ"

ಅದನ್ನು ಕೇಳಿ ಕಾಳಿದಾಸನು ಹೀಗೆ ಪ್ರತ್ಯುತ್ತ ಕೊಟ್ಟನು—

"ಮರ್ಮಜ್ಞಾಸೈವಸುಂದರೀ"

"ಆ ಸುಂದರಿಯು ಮರ್ಮವನ್ನು ತಿಳಿದವಳೇ"

ಭೋಜನು ಕಾಳಿದಾಸನ ಅದ್ಭುತಶಕ್ತಿಯನ್ನು ನೋಡಿ ಅತ್ಯಾಶ್ಚರ್ಯಗೊಂಡು ವಿಶೇಷವಾಗಿ ಹೊಗಳಿ ಪತಿದ್ರೋಹಿಣಿಯಾದ ಆ ಯುವತಿಯನ್ನು ರಹಸ್ಯವಾಗಿ ಕರೆಸಿ ಯುಕ್ತದಂಡವನ್ನು ವಿಧಿಸಿದನು.



## ನೂತನ ಕವಿಗಳು.

ಒಂದು ದಿನ ಕೆಲವರು ಸ್ವಯಂಪಾಠಿಗಳಾದ ನೂತನ ಕವಿಗಳು ಭೋಜರಾಜನು ಕವಿತ್ವಪ್ರಿಯನೆಂದೂ, ಇದುವರೆಗೆ ತಮ್ಮ ಅಧ್ಯಯನಕ್ಕೆ ತಕ್ಕ ಲಾಭವು ದೊರೆಯಲಿಲ್ಲವೆಂದೂ ಚಿಂತಿಸಿ, ಹೇಗಾದರೂ ತಾವೆಲ್ಲರೂ ಕವಿತ್ವವನ್ನು ಮಾಡಿ ಭೋಜರಾಜನನ್ನು ಮೆಚ್ಚಿಸಬೇಕೆಂದು ನಿಶ್ಚಯಿಸಿಕೊಂಡು ಭುವನೇಶ್ವರೀ ದೇವಾಲಯವನ್ನು ಪ್ರವೇಶಿಸಿ, ಒಂದು ಮೂಲೆಯಲ್ಲಿ ಕೂತುಕೊಂಡು ಆಲೋಚಿಸಿ ಆಲೋಚಿಸಿ, ಜನಿವಾರದಎಳೆಗಳನ್ನು ಬೆರಳುಗಳಿಗೆಸುತ್ತಿಕೊಂಡು ಕೆಳಗೆ ಮೇಲೆ ಬಿದ್ದು ಕೊನೆಗೆ ಒಂದು ಶ್ಲೋಕಪಾದವನ್ನು ಒಬ್ಬ ಪಂಡಿತನು ಈ ರೀತಿ ನುಡಿದನು—

" ಭೋಜನಂ ದೇಹಿ ರಾಜೇಂದ್ರ"

" ರಾಜಾ, ಅನ್ನವನ್ನಿಡು "

ಮತ್ತೊಬ್ಬನು ಹೀಗೆಯೇ ಅತಿ ಪ್ರಯಾಸಬಿದ್ದು, ಎರಡನೆಯ ಚರಣ ವನ್ನು ಹೇಳಿದನು.

" ಘೃತಸೂಪ ಸಮನ್ವಿತಂ "

" ತುಪ್ಪ ತೊವ್ವೆ ಇವುಗಳಿಂದ ಕೂಡಿದುದನ್ನು"

ಆಮೇಲೆ ಎಷ್ಟು ಆಲೋಚಿಸಿದರೂ ಉತ್ತರಾರ್ಧವು ಸ್ಫುರಿಸದೆ ಹೋಯಿತು.

ಆ ದಿನ ಕಾಳಿದಾಸನು ದೇವಿಯ ಸಂದರ್ಶನಕ್ಕಾಗಿ ದೇವಾಲಯಕ್ಕೈ ತಂದಿದ್ದನು. ಇವರೆಲ್ಲರೂ ಅದಲ್ಲವೆಂದೊಬ್ಬರೂ, ಇದಲ್ಲವೆಂದೊಬ್ಬರೂ ಹೀಗೆ ವಾದವಿವಾದಗಳನ್ನು ಮಾಡುತ್ತ ನಾನಾಪರಿ ಅವಸ್ಥೆಪಡುತ್ತ ಕಾಳಿದಾಸನನ್ನು ನೋಡಿ ನಮಸ್ಕರಿಸಿ—" ಅಯ್ಯಾ, ನಾವು ಘನಾಂತರದವರೆಗೆ ವೇದವನ್ನು ಪಠಿಸಿದರೂ ರಾಜನು ನಿಮ್ಮಹಾಗೆ ನಮಗೇನೂ ಕೊಡಲಾರನು. ಕವಿಗಳಿಗೆ ಯಥೇಚ್ಛವಾಗಿ ಅರ್ಥವನ್ನೀಯುವನು ಆದುದರಿಂದ ನಾವೆಲ್ಲರೂ ಕವಿತ್ವ ವನ್ನುಮಾಡಬೇಕೆಂದು ಬಹುಕಾಲದಿಂದಲೂ ಆಲೋಚಿಸಿ, ಶ್ಲೋಕವಪೂರ್ವಾರ್ಧವನ್ನು ಮಾತ್ರ ರಚಿಸಿರುವೆವು. ಉತ್ತರಾರ್ಧವು ಸ್ಫುರಿಸದೆ ಇರುವುದು ಅದನ್ನು ನೀನು ರಚಿಸಿಕೊಟ್ಟರೆ ನಮಗೇನಾದರೂ ರಾಜನು ಕೊಡುವನು " ಎಂದು ಪ್ರಾರ್ಥಿಸಿ, ತಾವು ರಚಿಸಿದ ಪೂರ್ವಾರ್ಧವನ್ನು ಪಠಿಸಿದರು. ಕಾಳಿ ದಾಸನು ಕೇಳಿ ಒಳಗೊಳಗೆ ನಗುತ್ತ

" ಮಾಹಿಷಂಚ ಶರಚ್ಚಂದ್ರ ಚಂದ್ರಿಕಾ ಧವಳಂದಧಿ "

ಎಂದು ಹೇಳಿ ಹೊರಟು ಹೋದನು.

ತರುವಾಯ ಆ ನೂತನ ಕವಿಗಳು ರಾಜಭವನ ದ್ವಾರಕ್ಕೆ ಹೋಗಿ " ಅಹೋ ! ರಾಜಭಟರೇ, ನಾವು ಕವಿತ್ವಮಾಡಿಕೊಂಡು ಬಂದಿರುವೆವು. ಆದುದರಿಂದ ರಾಜ ಸಂದರ್ಶನವನ್ನು ಮಾಡಿಸಿ " ಎಂದು ಕೇಳಿಕೊಂಡರು. ಭಟರು ಇವರ ವೇಷವನ್ನು ನೋಡಿ ನಗುತ್ತ ರಾಜಸನ್ನಿಧಿಗೆ ಹೋಗಿ ಈರೀತಿ ಬಿನ್ನವಿಸಿದರು.

“ ರಾಜ ಮಾಷನಿಭೈರ್ದಂತ್ಯೈಃ ಕಟಿವಿನ್ಯಸ್ತಪಾಣಯಃ
ದ್ವಾರಿ ತಿಷ್ಠಂತಿ ರಾಜೇಂದ್ರ ಛಾಂದಸಾಃ ಶ್ಲೋಕಶತ್ರವಃ ”

“ ರಾಜೇಂದ್ರಾ, ಅಲಸಂದಿಕಾಳುಗಳಂತಹ ದಂತಗಳುಂಟಾಗಿ, ಟೊಂಕದ ಮೇಲೆ ಕೈಗಳ ನ್ನಿಟ್ಟುಕೊಂಡು ಶ್ಲೋಕ ಶತ್ರುಗಳಾದ ಛಾಂದಸ ಬ್ರಾಹ್ಮಣರು ದ್ವಾರದಲ್ಲಿ ನಿಂತಿರುವರು.”

ಎಂದು ಹೇಳಲು ರಾಜನು ಒಳಗೆ ಬಿಡುವಂತೆ ಅಪ್ಪಣೆಮಾಡಿದನು. ಆಗಲಾ ನೂತನ ಕವಿಗಳು ರಾಜಾಜ್ಞೆಯಂತೆ ಸಭಾಭವನವನ್ನು ಪ್ರವೇಶಿಸಿ, ರಾಜನಿಗಾಶೀರ್ವಾದಮಾಡಿ ಎಲ್ಲರೂ ಒಂದೇ ಸಾರಿ ಈ ರೀತಿ ಹೇಳಿದರು—

“ ಭೋಜನಂ ದೇಹಿ ರಾಜೇಂದ್ರ ಘೃತಸೂಪಸಮನ್ವಿತಂ
ಮಾಹಿಷಂಚ ಶರಚ್ಚಂದ್ರ ಚಂದ್ರಿಕಾ ಧವಳಂದಧಿ ”

ಕಂ|| ಭೋಜನವಂ ನೀಡೆಮಗೆಲೆ |
ರಾಜೇಂದ್ರನೆ ತೊವ್ವೆ ತುಪ್ಪಗಳನೊಂದಿಹುದಂ ||
ರಾಜಿಸುವ ಶರಚ್ಚಂದ್ರನ |
ತೇಜದವೋಲಮಲವೆನಿಸಿದೆಮ್ಮೆಯ ಮೊಸರಂ ||

“ ರಾಜೇಂದ್ರಾ, ತುಪ್ಪ ತೊವ್ವೆಯಿಂದೊಡಗೂಡಿದ ಭೋಜನವನ್ನು (ತೊವ್ವೆ ಅನ್ನ) ಶರತ್ಕಾಲರ ಬೆಳದಿಂಗಳಂತೊಪ್ಪುವ ಬಿಳಿಯ ಮೊಸರಿನೊಡನೆ ಇಡಿಸು ”

ಭೋಜರಾಜನು ಈ ಶ್ಲೋಕವನ್ನು ಕೇಳಿ ಫಕ್ಕನೆ ನಕ್ಕು, ಶ್ಲೋಕದ ಉತ್ತರಾರ್ಧವು ಕಾಳಿದಾಸಕೃತವೆಂದರಿತು, ಆ ಬ್ರಾಹ್ಮಣರನ್ನು ನೋಡಿ ಹೀಗೆ ಹೇಳಿದನು—“ ಅಹೋ ವಿಪ್ರರೇ, ಈ ಶ್ಲೋಕದ ಪೂರ್ವಾರ್ಧವನ್ನು ರಚಿಸಿದವರ ಬಾಯಿಂದ ಕವಿತ್ವವೇ ಬರದು. ಆದುದರಿಂದ ಪೂರ್ವಾರ್ಧಕ್ಕೇನೂ ಕೊಡಲಾಗುವುದಿಲ್ಲ; ಉತ್ತರಾರ್ಧಕ್ಕೆ ಮಾತ್ರ ಸ್ವಲ್ಪ ಕೊಡಲಾಗುವುದು ” ಎಂದು ಹೇಳಿ ಉತ್ತರಾರ್ಧಕ್ಕೆ ಪ್ರತಿ ಅಕ್ಷರಕ್ಕೆ ಲಕ್ಷದ್ರವ್ಯವನ್ನು ಕೊಟ್ಟನು.

ಅವರು ಧನವನ್ನು ಪರಿಗ್ರಹಿಸಿ ಹೊರಟು ಹೋಗಲಾಗಿ ರಾಜನು ಕಾಳಿದಾಸನನ್ನು ನೋಡಿ–‘ ಕವೀಂದ್ರಾ, ಈ ಶ್ಲೋಕದ ಉತ್ತರಾರ್ಧವನ್ನು ನೀನೇ ಅಲ್ಲವೇ ರಚಿಸಿದವನು ? ’ ಎಂದು ಕೇಳಿದನು. ಕಾಳಿದಾಸನು ಪ್ರತ್ಯುತ್ತರವಾಗಿ ಹೀಗೆ ಹೇಳಿದನು—

ಶ್ಲೋ|| ಅಧರಸ್ಯಮಧುರಿಮಾಣಂ ಕುಚಕಾಠಿನ್ಯಂದೃಶೋಸ್ತೈಕ್ಷ್ಣ್ಯಂಚ
ಕವಿತಾಯಾಃ ಪರಿಪಾಕಂ ಹ್ಯನುಭವರಸಿಕೋ ವಿಜಾನಾತಿ

ಕಂ|| ಅಧರದ ಸವಿಯಂ ಕುಚಯು |
ಗ್ಮದ ಕಠಿನತೆಯಂ ಕಟಾಕ್ಷದುರುತೀಕ್ಷ್ಣತೆಯಂ ||
ಹೃದಯದ ನೆಳವಾಸುಕವಿ |
ತ್ವದರಸಮಂ ತಿಳಿವನಲ್ತೆಯನುಭವರಸಿಕಂ ||

“ತುಟಿಯ ಮಾಧುರ್ಯವನ್ನೂ ಕುಚದ ಕಾಠಿನ್ಯವನ್ನೂ, ದೃಷ್ಟಿಯ ತೀಕ್ಷ್ಣತೆಯನ್ನೂ, ಕವಿತ್ವದ ಪರಿಪಾಕವನ್ನೂ ಅನುಭವದಿಂದ ರಸಜ್ಞನಾದವನು ಗ್ರಹಿಸುವನು”

ಎಂದುಹೇಳಿದ ಕಾಳಿದಾಸನ ವಾಕ್ಯವನ್ನು ಕೇಳಿ ಭೋಜರಾಜನು ಆನಂದಿಸಿ ವಿಶೇಷವಾಗಿ ಗೌರವಿಸಿದನು.

**ಸಂಪೂರ್ಣ.**



ಶ್ರೀ ಪಾರ್ಶ್ವನಾಥ ಪ್ರೆಸ್, ತುಮಕೂರು